## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದು ಅವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ಹಲವಾರು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ

ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

ಈ ಉಪಯುಕ್ತ ಕೃತಿಯನ್ನು ಹೊರತರುವಲ್ಲಿ ವಿಶ್ವವಿದ್ಯಾಲಯದ ಪ್ರಸಾರಾಂಗದ ಜೊತೆ ಸಹಕರಿಸಿದ ಪ್ರೊ॥ ಎಸ್. ಕೆ. ರಾಮಚಂದ್ರರಾವ್ ಅವರಿಗೆ ವಿಶ್ವವಿದ್ಯಾಲಯದ ಪರವಾಗಿ ನನ್ನ ಅಭಿನಂದನೆಗಳು.

ಡಾ॥ ಎಂ. ಎನ್. ವಿಶ್ವನಾಥಯ್ಯ
ಉಪಕುಲಪತಿ

## ಲೇಖಕರ ಮಾತು

ನಮ್ಮವರಲ್ಲಿ ನಾಡ ವೈದ್ಯವನ್ನು ಕುರಿತು ಆದರ ಇಂಗುತ್ತಿರುವಾಗ ಆದರ ಪರಿಚಯ ಅಷ್ಟಿಷ್ಟಾದರೂ ಆಗಲೆಂಬ ಉದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ 'ದುಡಿಯುವ ಜನತೆಗೆ ಮೌಲ್ಯ ಪ್ರಸಾರ' ಮಾಲೆಯಲ್ಲಿ ನಾನು ಕೆಂಗೇರಿ ಉಪನಗರದಲ್ಲಿ ಮಾಡಿದ ಪ್ರಚಾರೋಪನ್ಯಾಸ ಈ ಪುಸ್ತಕದ ಮೂಲವಸ್ತು.

ಆಯುರ್ವೇದ ನನ್ನ ಮನೆತನದಲ್ಲಿ ಹಲವಾರು ತಲೆ ಮಾರುಗಳಿಂದ ಬಂದಿದ್ದುದು. ಅದು ನನ್ನ ಕಾಲಕ್ಕೆ ಕುಂಟಿತು; ನನ್ನ ಒಲುವು, ಅಭ್ಯಾಸ, ವೃತ್ತಿ ವ್ಯವಸಾಯಗಳು ಬೇರೆಡೆ ತಿರುಗಿದುವಾಗಿ ಬಹುಕಾಲ ಇದನ್ನು ದೂರವಿಟ್ಟಿರಬೇಕಾಯಿತಂ. ಚಿಕ್ಕಂದಿನಿಂದ ಆಯುರ್ವೇದಶಾಸ್ತ್ರ ಗ್ರಂಥಗಳ ಅಧ್ಯಯನ ವೇನೋ ನಡೆಯಿತೆನ್ನಿ; ಮನೆಯಲ್ಲಿ ಇದೇ ವೈದ್ಯವೇ ಇದ್ದುದ ರಿಂದ ಅದರ ಪರಿಚಯವೂ ಸುಮಾರಾಗಿಯೇ ಉಳಿದು ಕೊಂಡಿತು. ಈಚೆಗೆ ಉಳಿದ ಹವ್ಯಾಸಗಳಿಂದ ಕಳಚಿಕೊಂಡು ಆಯುರ್ವೇದ ಕ್ಷೇತ್ರದಲ್ಲೇ ಕೆಲಸಮಾಡುವ ಅವಕಾಶ ಒದಗಿ ಬಂದುದು ನನ್ನ ಪುಣ್ಯ.

ಆಯುರ್ವೇದದ ಪಾರಿಭಾಷಿಕ ಪದಗಳನ್ನು ವಿಶ್ವ ಕೋಶದ ಪದ್ಧತಿಯಲ್ಲಿ ಐದು ಸಂಪುಟಗಳಲ್ಲಿ ಪ್ರಕಟಿಸುವ ಒಂದು ಯೋಜನೆಗೆ ಮುಖ್ಯ ಸಂಪಾದಕನಾಗಿ ಹೊಣೆಯನ್ನು

ಹೊತ್ತ ಮೇಲೆ ಆಯುರ್ವೇದಕ್ಕೆ ನನ್ನ ಋಷಿಋಣ, ಪಿತೃಋಣ
ಗಳೆರಡನ್ನೂ ತೀರಿಸುವ ಅವಕಾಶ ಒದಗಿಬಂದಿದೆ. ಈ ಅವಕಾಶ
ವನ್ನು ಒದಗಿಸಿಕೊಟ್ಟವರು ಯೋಜನೆಯ ಅಧ್ಯಕ್ಷರಾದ
ಡಾ॥ ವಿ. ಪರಮೇಶ್ವರ ಅವರು, ನಗರದ ಹೆಸರಾಂತ ಹೃದಯ
ವೈದ್ಯರು. ಅವರಿಗೆ ನನ್ನ ಕೃತಜ್ಞತೆ ಸಲ್ಲಬೇಕು.

ಈ ಉಪನ್ಯಾಸವನ್ನು ಏರ್ಪಡಿಸಿ, ಕೊನೆಗೆ ಪುಸ್ತಕ
ರೂಪದಲ್ಲಿ ಪ್ರಕಟಿಸಿದ ಪ್ರಸಾರಾಂಗದ ಉಪ-ನಿರ್ದೇಶಕರಾದ
ಶ್ರೀ ಕೆ. ಸಿ. ಶಿವಪ್ಪನವರಿಗು ಮತ್ತು ಈ ಕೃತಿಯನ್ನು
ಅಚ್ಚುಕಟ್ಟಾಗಿ ಮುದ್ರಿಸಿದ ವಿಶ್ವವಿದ್ಯಾಲಯದ ಮುದ್ರ
ಣಾಲಯದ ಸಿಬ್ಬಂದಿ ವರ್ಗಕ್ಕೆ ನನ್ನ ವಂದನೆಗಳು ಸಲ್ಲುತ್ತವೆ.

ಸಾ. ಕೃ. ರಾಮಚಂದ್ರರಾವ್

## ಪರಿವಿಡಿ

# ೧. ಆಯುರ್ವೇದದ ಜಾನಪದಮೂಲ

ಆಯುರ್ವೇದ ನಮ್ಮ ನಾಡಿನಲ್ಲಿ ತುಂಬ ಹಿಂದಿನಿಂದ ಬೆಳೆದು ಬಂದ ವೈದ್ಯಪದ್ಧತಿ; ಇದು ಇಲ್ಲಿಯೇ ಮೊದಲಾಗಿ ನಮ್ಮವರೇ ಇದನ್ನು ಬೆಳೆಸಿದರಾಗಿ ಇದನ್ನು ಭಾರತೀಯವೈದ್ಯವೆಂದರೆ ತಪ್ಪಾಗದು. ಸುಮಾರು ಒಂದು ನೂರು ವರ್ಷಗಳ ಹಿಂದೆ ಇಡೀ ನಾಡಿನಲ್ಲೆಲ್ಲ ಬಳಕೆಯಲ್ಲಿದ್ದುದು ಇದೊಂದೇ ವೈದ್ಯ ಪದ್ಧತಿ. ಅಂದಿನಿಂದೀಚೆಗೆ 'ಇಂಗ್ಲಿಷ್' ವೈದ್ಯ ಹೆಚ್ಚು ಹೆಚ್ಚಾಗಿ ಹರಡಿಕೊಳ್ಳುತ್ತಿದೆ. 'ಇಂಗ್ಲಿಷ್' ವೈದ್ಯವೆಂದು ಇದರ ಸಾಮಾನ್ಯವಾದ ಹೆಸರಾದರೂ, ಪಾಶ್ಚಾತ್ಯವೈದ್ಯ ವೆಂದಾಗಲೀ ಆಧುನಿಕ ವೈದ್ಯವೆಂದಾಗಲೀ ಕರೆದರೆ ಹೆಚ್ಚಾಗಿ ಒಪ್ಪುತ್ತದೆ. ಗ್ರೀಕ್ ವೈದ್ಯದ ಹಿನ್ನೆಲೆಯಿಂದ ಇದು ಬೆಳೆದು ತಾದರೂ ಪ್ರಾಚ್ಯದೇಶಗಳ ವೈದ್ಯಪ್ರಭಾವವನ್ನು ತಕ್ಕಮಟ್ಟಿಗೆ ಅಳವಡಿಸಿಕೊಂಡು ಆಧುನಿಕವಿಜ್ಞಾನದ ಚೌಕಟ್ಟಿನಲ್ಲಿ ಇಂದು ನಿಂತಿದೆ. ಎಡೆಬಿಡದೆ ಸಂಶೋಧನೆಗಳು ನಡೆಯುತ್ತ, ಹೊಸ ಹೊಸ ಮದ್ದುಗಳು ಮೈದಳೆಯುತ್ತ, ಪ್ರಪಂಚದಲ್ಲೆಲ್ಲ ಪ್ರಯೋಗಗಳು ನಡೆಯುತ್ತ, ಆಧುನಿಕ ಮನೋಧರ್ಮಕ್ಕೆ ಒಗ್ಗುವಂತೆ ಚಿಕಿತ್ಸೆಗಳನ್ನು ಸೂಚಿಸುತ್ತ ಇರುವ ಈ ವೈದ್ಯ ಪದ್ಧತಿ ಇಂದು ಪ್ರಪಂಚದಲ್ಲೆಲ್ಲ ಹರಡಿದೆ.

ಪಾಶ್ಚಾತ್ಯ ದೇಶಗಳಲ್ಲಿ ಬಹುಕಾಲದಿಂದ ಬಹುಮಟ್ಟಿಗೆ ಇರುವುದು ಇದೊಂದೇ ಪದ್ಧತಿ, ಅದನ್ನು ಬಿಟ್ಟರೆ ಆ ಜನರಿಗೆ

ಬೇರೆ ದಾರಿಯೇ ಇಲ್ಲ ಎಂದರೂ ಸರಿಯೇ. ಹೋಮಿಯೋಪತಿ, ಪ್ರಕೃತಿಚಿಕಿತ್ಸೆ, ಜಲವೈದ್ಯ ಮೊದಲಾದ ಇತರ ಕೆಲವು ಪದ್ಧತಿಗಳು ಕೊಂಚಮಟ್ಟಿಗೆ ಬಳಕೆಯಲ್ಲಿವೆಯೆನ್ನಿ. ಆದರೆ ಇವೆಲ್ಲವೂ ಕೂಡಿದರೂ ಆಧುನಿಕವೈದ್ಯದ ನೂರರಲ್ಲೊಂದು ಪಾಲಾಗದು! ಆಧುನಿಕವೈದ್ಯ ಸುಮಾರು ಇನ್ನೂರು–ಮುನ್ನೂರು ವರ್ಷಗಳಿಂದ ಮೈದುಂಬಿಕೊಂಡು ಬಂದಿದೆಯಷ್ಟೆ. ಅದಕ್ಕೆ ಮೊದಲು ಆ ದೇಶಗಳಲ್ಲಿ ಬಳಸುತ್ತಿದ್ದ ಜಾನಪದ ಚಿಕಿತ್ಸೆಗಳಿಗೆ ಹೆಚ್ಚಿನ ಬೆಲೆಯಿರಲಿಲ್ಲವೆಂದು ತೋರುತ್ತದೆ. ಆ ಚಿಕಿತ್ಸೆಗಳು ಯಾವುವೂ ಆಧುನಿಕವೈದ್ಯದಲ್ಲಿ ಸೇರಿಬರಲಿಲ್ಲ. ಆಧುನಿಕವೈದ್ಯ ಪಾಶ್ಚಾತ್ಯ ಜಾನಪದ ನೆಲೆಯಿಂದ ಎದ್ದುದು ಎಂದು ಹೇಳುವಹಾಗಿಲ್ಲ. ವಿಜ್ಞಾನ, ಉದ್ಯಮಗಳ ಕೈಕೂಸು ಇದು. ಹೀಗಾಗಿ ಆ ಜನರಿಗೆ ಆ ವೈದ್ಯವೊಂದೇ ಗತಿಯಾಗಿದೆ.

ನಮ್ಮ ದೇಶದ ಪರಿಸ್ಥಿತಿ ಬೇರೆ. ಸಾವಿರಾರು ವರ್ಷಗಳಿಂದ ಇಲ್ಲಿ ಬೆಳೆದುಬಂದ ನಾಡವೈದ್ಯಕ್ಕೆ ಖಚಿತವಾದ ಜಾನಪದ ಹಿನ್ನೆಲೆಯಿದೆ. ಮುಂದೆ ಶಾಸ್ತ್ರಮರ್ಯಾದೆಯನ್ನು ಪಡೆದುಕೊಂಡು ಆಯುರ್ವೇದವೆಂದು ಹೆಸರಾದ ಈ ವೈದ್ಯ ಇಂದಿಗೂ ಜಾನಪದ ಚಿಕಿತ್ಸೆಗಳನ್ನೇ ಹೆಚ್ಚಾಗಿ ಅವಲಂಬಿಸುತ್ತದೆ. ಅದರ ಜಾನಪದ ಸಂಪರ್ಕ ಎಂದಿಗೂ ಕಡಿಯಲಿಲ್ಲ; ಇಂದಿಗೂ ಮರೆಯಾಗಿಲ್ಲ. ಪಾಶ್ಚಾತ್ಯವೈದ್ಯ ನಮ್ಮ ದೇಶಕ್ಕೆ ಕಾಲಿಟ್ಟುದು ಇಂಗ್ಲಿಷ್ ಜನರು ಉದ್ಯಮಕ್ಕೆಂದು ಇಲ್ಲಿಗೆ ಬಂದಾಗ, 1790ರ ಸುಮಾರಿಗೆ; ಅದು ಬೆಳೆದುದು ಆ ಜನರು ಈ ದೇಶವನ್ನು ಆಳತೊಡಗಿದಮೇಲೆ; 1813ರ ಸುಮಾರಿಗೆ. ಕಲ್ಕತ್ತಾ, ಮುಂಬಯಿ, ಮದ್ರಾಸ್, ಲಾಹೋರ್ ನಗರಗಳಲ್ಲಿ

1857ರಲ್ಲಿ ಪಾಶ್ಚಾತ್ಯವೈದ್ಯವನ್ನು ನಮ್ಮ ಜನರಿಗೆ ಕಲಿಸುವ ಸಲುವಾಗಿ ಕಾಲೇಜುಗಳು ಕಾಣಿಸಿಕೊಂಡುವು. ಎಂದರೆ ನಮ್ಮ ಜನರಿಗೂ 'ಇಂಗ್ಲಿಷ್' ವೈದ್ಯಕ್ಕೂ ಇರುವ ನಂಟು ಸುಮಾರು ನೂರಮುಊವತ್ತು ವರ್ಷಗಳಷ್ಟು ಹಿಂದಿನದು ಅಷ್ಟೆ. ಈ ಕಾಲದಲ್ಲಿ ಅದರ ಬಲ ಹೆಚ್ಚಿತು, ಜನಪ್ರೀತಿ ಬೆಳೆಯಿತು, ನಾಡ ವೈದ್ಯ ಹಿಂದಕ್ಕೆ ಬಿದ್ದಿತು ನಿಜ. ಆದರೆ ಇಂಗ್ಲಿಷ್ ವೈದ್ಯ ಇಲ್ಲಿಗೆ ಬರುವ ಮೊದಲು ಚೆನ್ನಾಗಿಯೇ ಬೆಳೆದು ನಿಂತಿದ್ದ ಆಯುರ್ವೇದ ಜನರ ನಡುವೆ ಉಳಿದುಕೊಂಡಿತು.

ನಮ್ಮ ಜನರಿಗೆ ಬರುಬರುತ್ತ ಪಾಶ್ಚಾತ್ಯವೈದ್ಯದ ಮೇಲೆ ಅಭಿಮಾನ ಬೆಳೆದದ್ದು, ನಮ್ಮಲ್ಲಿ ವೈದ್ಯ ಪದ್ಧತಿಯೇ ಇರಲಿಲ್ಲ ಎಂದಲ್ಲ, ನಾಡವೈದ್ಯದಲ್ಲಿ ಸ್ವಾರಸ್ಯವಿರದೆಂದಲ್ಲ ; ನಾಗರಿಕತೆಯ ಗಾಳಿಯಿಂದಾಗಿ. ನಮ್ಮ ವೇಷ–ಭೂಷಣಗಳೂ, ಆಹಾರ–ಆಚಾರಗಳೂ, ವಿಹಾರ–ವಿಚಾರಗಳೂ, ಭಾಷೆ–ಬಿನ್ನಾಣಗಳೂ ಆಧುನಿಕತೆಯತ್ತ ಒಲಿದಾಗ ವೈದ್ಯದ ಆಯ್ಕೆಯೂ ಆ ಕಡೆಗೇ ಒಲಿಯಿತು. ಆದರೆ ಈ ನಾಗರಿಕತೆಯ ಗಾಳಿ ಅಷ್ಟಾಗಿ ಬೀಸದಿರುವ ಹಳ್ಳಿಗಾಡಿನಲ್ಲಿ ನಾಡವೈದ್ಯವೇ ಉಳಿದಿದೆ. ನಾಗರಿಕತೆಯ ಗಾಳಿ ಬೀಸುವೆಡೆಗಳಲ್ಲೂ ನಾಡವೈದ್ಯದ ಹರವು ಅಷ್ಟಾಗಿ ಕುಗ್ಗಿಲ್ಲ. ನಾಡಿನ ಬಹುಜನರಿಗೆ ಆಯುರ್ವೇದದ ಆಸರೆ ಇಂದಿಗೂ ತಪ್ಪಿಲ್ಲ.

ಮೇಲಾಗಿ, ಆಯುರ್ವೇದ ನಮ್ಮ ಸಂಸ್ಕೃತಿಯ ಒಂದು ಅಂಗ. ಇದನ್ನು ಆಧುನಿಕ ವೈದ್ಯದ ವಿಚಾರವಾಗಿ ಹೇಳು ವಂತಿಲ್ಲ. ಪಾಶ್ಚಾತ್ಯ ಸಂಸ್ಕೃತಿಗೂ ಆಧುನಿಕ ವೈದ್ಯಕ್ಕೂ ನಿಕಟವಾದ ನಂಟೇನೂ ಇಲ್ಲ. ಗ್ರೀಕ್ ವೈದ್ಯವೇನೋ

ಗ್ರೀಕ್ ಸಂಸ್ಕೃತಿಯ ಅಂಗವಾಗಿಯೇ ಬೆಳೆಯಿತು. ಅದ
ಗ್ರೀಕ್ ವೈದ್ಯವು ಪಾಶ್ಚಾತ್ಯ ವೈದ್ಯವಾಗಿ ಮೈದಳೆಯು
ಮೊದಲು ಅಲೆಗ್ಸಾಂಡ್ರಿಯ, ಅರೇಬಿಯ, ಪರ್ಶಿಯ ದೇಶಗ
ವೈದ್ಯಪ್ರಕಾರಗಳನ್ನು ಅರಗಿಸಿಕೊಂಡಿತು. ಪಾಶ್ಚಾತ್ಯದೇಶಗಳ
ಈ ವೈದ್ಯ ಮರಳಿದಾಗ ಪಾಶ್ಚಾತ್ಯಸಂಸ್ಕೃತಿಯ ಚೌಕಟ್ಟು
ಆಗಲೇ ಸಿದ್ಧವಾಗಿದ್ದಿತು. ಈ ವೈದ್ಯಕ್ಕೂ ಆ ಸಂಸ್ಕೃತಿಗ
ಸಂಬಂಧವಿರಬೇಕಾದ ಕಾರಣವಿರಲಿಲ್ಲ. ಮುಂದೆ ಅಲ್ಲಿ ವೈದ
ಬೆಳೆದದ್ದು ವಿಜ್ಞಾನದ ವಿಭಾಗವಾಗಿ. ಜನರ ನಿತ್ಯಜೀವನಕ್ಕೂ
ಬದುಕಿನ ಧೋರಣೆಗಳಿಗೂ, ಆಧ್ಯಾತ್ಮಿಕ ಪ್ರವೃತ್ತಿಗಳಿಗ
ವೈದ್ಯದ ನೆರವು ಅಗತ್ಯವೆಂದು ಕಾಣಿಸಿಕೊಳ್ಳಲಿಲ್ಲ. ಅಲ್ಲಿ
ಸಂಸ್ಕೃತಿಯೊಂದಿಗೆ ಆ ವೈದ್ಯ ಹೆಣೆದುಕೊಳ್ಳಲಿಲ್ಲ.

ಆದರೆ ನಮ್ಮಲ್ಲಿ ಆಯುರ್ವೇದ ದಿನದಿನದ ಬದುಕಿ
ಸಂಬಂಧಿಸಿದ್ದು. ನಾವು ಮಾಡುವ ಊಟ, ಉಡುವ ಬಟ್ಟೆ
ಕೈಗೊಳ್ಳುವ ಕೆಲಸ ಇವೆಲ್ಲವೂ ನಾಡವೈದ್ಯದ ಮೂಲ ತತ್ತ್ವ
ಗಳನ್ನು ಅವಲಂಬಿಸಿದುವೇ. ಹಬ್ಬಹರಿದಿನಗಳಲ್ಲಿ ಮಾಡುವ
ಅಡುಗೆಯ ಓರಣ, ಭಕ್ಷ್ಯ–ಭೋಜ್ಯಗಳ ತಿಂಡಿ-ತಿನಿಸುಗಳ
ಸಂವಿಧಾನ, ಬೇರೆಬೇರೆ ಋತುಗಳಲ್ಲಿ ಬದಲಾಗುವ ಆಹಾರ-
ವಿಹಾರ, ಊಟಮಾಡುವಾಗ ಗಮನಿಸಬೇಕಾದ ನಿಯಮಗಳು
ಊಟದ ನಂತರ ಜಗಿಯಬೇಕಾದ ತಾಂಬೂಲ, ದಿನವೂ
ಮಾಡಬೇಕಾದ ಸ್ನಾನ, ಆಸನ, ವ್ಯಾಯಾಮ, ಚಂಕ್ರಮಣ
ವಿಹಾರ ಮೊದಲಾದ ವಿವರಗಳ ತಾತ್ಪರ್ಯವನ್ನು ತಿಳಿದ
ಕೊಂಡರೆ ಆಯುರ್ವೇದದ ಬಹುಭಾಗವನ್ನು ಮನದಟ್ಟು
ಮಾಡಿಕೊಂಡಂತೆಯೇ!

ಆಯುರ್ವೇದದ ಅಂಗವಾದ ಸ್ವಸ್ಥವೃತ್ತ-ಸದ್‌ವೃತ್ತ ಎಂಬ ಪ್ರಕಾರವು ನಮ್ಮ ಜನರ ಸಂಸ್ಕೃತಿಗೆ ನೇರವಾಗಿ ಸಂಬಂಧಿಸಿದುದು. ರೋಗ ಬಂದಮೇಲೆ ಮದ್ದನ್ನು ಮಾಡಿಕೊಳ್ಳುವುದಕ್ಕಿಂತ ರೋಗ ಬರದಿರುವಂತೆ ಎಚ್ಚರವಹಿಸುವುದು ಈ ವೈದ್ಯದ ಮೊದಲ ಸೂತ್ರ. ಕೆಸರಲ್ಲಿ ಕಾಲಿರಿಸಿ ಕಾಲನ್ನು ತೊಳೆದುಕೊಳ್ಳುವುದಕ್ಕಿಂತ ದೂರದಿಂದಲೇ ಕೆಸರನ್ನು ಕಂಡು ಓರೆಯಾಗುವುದು ಜಾಣತನವಲ್ಲವೆ ? ದೇಹದ, ಮನಸ್ಸಿನ ನೆಮ್ಮದಿ ತಪ್ಪದೆ ಇರುವಂತೆ ನಮ್ಮ ದಿನದಿನದ ಊಟ, ತಿಂಡಿ, ಉಡುಗೆ, ಉಪಚಾರ, ಆಚಾರ, ವ್ಯವಹಾರ, ಎಚ್ಚರ, ನಿದ್ದೆ, ಸ್ನಾನ, ಪಾನ, ವ್ಯಾಯಾಮ, ಪ್ರವಾಸ, ಅಭ್ಯಾಸಗಳಲ್ಲೆಲ್ಲ ಮುಂಜಾಗ್ರತೆ ವಹಿಸುವಂತೆ ಆಯುರ್ವೇದ ಶಾಸ್ತ್ರದಲ್ಲಿ 'ದಿನಚರ್ಯೆ', 'ಋತುಚರ್ಯೆ'ಗಳೆಂಬ ಸಲಹೆಗಳು ಬರುತ್ತವೆ. ನಾಣ್ಣುಡಿಯಂತಿರುವ ಸಂಸ್ಕೃತಶ್ಲೋಕವೊಂದು ವ್ಯಾಯಾಮ, ಮಿತಾಹಾರ ಎರಡು ಇದ್ದರೆ ಯಾವ ವೈದ್ಯನೂ ಬೇಕಾಗಿಲ್ಲವೆಂದು ಹೇಳುತ್ತದೆ.

'ರೋಗಾನುತ್ಪಾದನೀಯ' (ಎಂದರೆ preventive medicine) ಎಂಬ ವಿಭಾಗ ಆಯುರ್ವೇದಕ್ಕೂ ನಮ್ಮ ಜಾನಪದ ಸಂಸ್ಕೃತಿಗೂ ಸಾವಿರಾರು ವರ್ಷಗಳಿಂದ ನೇರವಾದ ನೆಂಟನ್ನು ಒದಗಿಸಿದೆ. ಪಾಶ್ಚಾತ್ಯ ವೈದ್ಯದಲ್ಲಿ ಈ ವಿಭಾಗ ಮೂಡಿಕೊಂಡದ್ದು ಒಂದುನೂರು ವರ್ಷಗಳಿಂದ ಈಚೆಗೇ. ತುರ್ಕಿಜನರು 1700ರ ಸುಮಾರಿಗೆ ಸಿಡುಬು ರೋಗವನ್ನು ತಡೆಗಟ್ಟಲು ಆರೋಗ್ಯವಂತರಾದ ಜನರ ಮೇಲೆ ಚುಚ್ಚು ಮದ್ದನ್ನು ಬಳಸಿದ ಪ್ರಯತ್ನ ಇಪ್ಪತ್ತು ವರ್ಷಗಳ ಮೇಲೆ

ಇಂಗ್ಲೆಂಡನ್ನು ಮುಟ್ಟಿತು ; ಮೇರಿ ವೋರ್ಟ್ಲೆ ಮಾಂಟೆಗ
ಎಂಬಾಕೆ ಇದನ್ನು ಜನಪ್ರಿಯವನ್ನಾಗಿ ಮಾಡಲು ಹೆಣಗಾ
ದಳು. ಅದು ಅಮೆರಿಕದೇಶದಲ್ಲಿ ಬಳಕೆಗೆ ಬಂದದ್ದು ಹದಿನೆಂ
ನೆಯ ಶತಮಾನದ ಕಡೆಯ ವರ್ಷಗಳಲ್ಲೇ ! ಪಾಶ್ಚಾತ್ಯವೈದ್ಯ
ರೋಗಾನುತ್ಪಾದನೀಯ ವಿಭಾಗದಲ್ಲಿ ಮೊದಲ ಮೈಲಿಗಲ್ಲ
1798ರಲ್ಲಿ ಎಡ್ವರ್ಡ್ ಜೆನ್ನರ್ ನಡೆಸಿದ ಚುಚ್ಚುವೈದ್ಯ
ಪ್ರಯೋಗ. ಅಲ್ಲಿಂದ ಮುಂದೆ ಬಹುಮಟ್ಟಿಗೆ ಸಾಂಕ್ರಾಮಿ
ರೋಗಗಳನ್ನು ತಡೆಗಟ್ಟುವುದೇ ಈ ವಿಭಾಗದ ಚೌಕಟ್ಟಾಯಿತು
ವ್ಯಕ್ತಿಯ ನಿತ್ಯಜೀವನದಲ್ಲಿ ಆಹಾರ–ವಿಹಾರಗಳನ್ನು ನೇರವಾ
ಕೊಳ್ಳಬೇಕೆಂಬ ಆಯುರ್ವೇದದ ಕಲ್ಪನೆ ಅಲ್ಲಿ ಬೆಳೆಯಲಿಲ್ಲ.

ಆಯುರ್ವೇದದ ಮೂಲ ತತ್ತ್ವವೇ ನಾವು ಬದುಕು
ಬಗೆಗೂ ನಮ್ಮನ್ನು ಕಾಡುವ ರೋಗಕ್ಕೂ ನಂಟಿದೆಯೆಂಬುದು
ಆದುದರಿಂದಲೇ ಈ ವೈದ್ಯ ನಮ್ಮ ಜಾನಪದಸಂಸ್ಕೃತಿಗೆ ತೀ
ಹತ್ತಿರವೇ ಹೊಂದಿಕೊಂಡು ಬೆಳೆಯಿತು. ಆಯುರ್ವೇದ
ಹಲವಾರು ಕಲ್ಪನೆಗಳೂ ಕಲ್ಪಗಳೂ ಮದ್ದುಗಳೂ ವೈದ್ಯರಿ
ಮಾತ್ರ ಮೀಸಲಾದ ತಿಳುವಳಿಕೆಯಲ್ಲ. ಹಳ್ಳಿಯ ಹಿರಿಯರೂ
ಮನೆಯ ಅಜ್ಜಿಯರೂ, ಮಕ್ಕಳ ತಾಯಂದಿರೂ, ಶಾಲೆ
ಮಾಸ್ತರರೂ, ಅಡುಗೆಯ ಭಟ್ಟರೂ, ಗುಡಿಯ ಪೂಜಾರರೂ
ಈ ತಿಳುವಳಿಕೆಯಲ್ಲಿ ಧಾರಾಳವಾಗಿ ಪಾಲ್ಗೊಂಡಿರುತ್ತಿದ್ದರು
ನಾಡವೈದ್ಯ ಬೆಳೆದುದು ಹೀಗೆಯೇ ; ಉಳಿದುಕೊಂಡಿರುವುದು
ಹೀಗೆಯೇ.

ಆಯುರ್ವೇದದ ಜಾನಪದ ನೆಲೆಯನ್ನು ಚರಕನೇ ಒಪ್ಪಿ
ಕೊಂಡಿದ್ದಾನೆ. ದನ ಕಾಯುವವರು, ಬೇಡರು, ಕಾಡುಜನರ

ತಪಸ್ವಿಗಳು ಇವರಿಂದ ಚಿಕಿತ್ಸೆಯ ಬಗೆಗಳು ಉಳಿದು ಬಂದು ದನ್ನು ಅವನು ನೆನೆಸಿಕೊಂಡಿದ್ದಾನೆ. ಇದೇ ಮಾತು 'ಧನ್ವಂತರಿ ನಿಘಂಟು'ವಿನಲ್ಲೂ ಬಂದಿದೆ. ಹೂಮಾಲೆಗಳನ್ನು ಕಟ್ಟುವವರು, ಚರ್ಮದ ಕೆಲಸಮಾಡುವ ಚಮ್ಮಾರರು, ನಾಪಿತ, ಅಗಸ, ಅಡಗೂಲಜ್ಜಿ ಇವರು 'ಪಂಚ ಚಿಕಿತ್ಸಕ'ರೆಂದು ಹೇಳುವ ಶ್ಲೋಕ ವೊಂದಿದೆ. ಆದರೆ ಇವರ ವೈದ್ಯ ಕುರುಡುಜಾಡಿನ ಮೇಲೆ ನಡೆಯುವುದೆಂದೂ, ಅದನ್ನು ಶಾಸ್ತ್ರವೆನ್ನಲಾಗದೆಂದೂ, ಆಯು ರ್ವೇದದ ನಿಲುವು ಇಷ್ಟಕ್ಕೇ ಮುಗಿದಿಲ್ಲವೆಂದೂ ಚರಕ ಎಚ್ಚರಿ ಸುತ್ತಾನೆ. ಆಯುರ್ವೇದದ ಮೂಲವೇನೋ ಜಾನಪದ ವೈದ್ಯವಾದರೂ ಅದು ಬೆಳೆವದ್ದು ಶಾಸ್ತ್ರಮರ್ಯಾದೆಯ ಕಟ್ಟುಪಾಡಿನಲ್ಲಿ ; ಸಭ್ಯತೆಯ ಚೌಕಟ್ಟಿನೊಳಗೇ.

ಹಳ್ಳಿಯ ಮದ್ದು, ಅಜ್ಜಿಯ ಮದ್ದು, ಬೇಡರ ಮದ್ದು, ಹಾವಾಡಿಗನ ಮದ್ದು, ಲಂಬಾಣಿಜನರ ಮದ್ದು, ಇವೆಲ್ಲ ಆಯುರ್ವೇದದಲ್ಲಿ ಸೇರುತ್ತವೆ. ಆದರೆ ಆಯುರ್ವೇದ ಇಷ್ಟಕ್ಕೇ ಮುಗಿಯುವುದಿಲ್ಲ. ರೋಗದ ಕಾರಣ, ರೋಗದ ಆಕಾರ, ರೋಗದ ವಿವರಗಳು, ರೋಗಕ್ಕೆ ತಕ್ಕ ಮದ್ದು, ಆ ಮದ್ದಿನ ಗುಣ, ಅದು ಮಾಡುವ ಕೆಲಸ, ಮದ್ದನ್ನು ಮಾಡುವ ಬಗೆ, ಮದ್ದನ್ನು ಕೊಡುವ ರೀತಿ, ರೋಗಿಯು ಹಿಡಿಯಬೇಕಾದ ಪಥ್ಯ ಮೊದಲಾದ ಎಲ್ಲ ವಿವರಗಳನ್ನೂ ಕುರಿತು ಈ ಶಾಸ್ತ್ರ ಆಳವಾಗಿ ಅಭ್ಯಾಸ ಮಾಡುತ್ತದೆ ; ಬಗೆಬಗೆಯ ರೋಗಗಳನ್ನೂ ಬಗೆಬಗೆಯ ಮದ್ದುಗಳನ್ನೂ ಬಣ್ಣಿಸುತ್ತದೆ. ಹೀಗೆ ಮಾಡು ವಾಗ, ಜಾನಪದ ನೆಲೆಯನ್ನು ಮೀರಿ ಶಾಸ್ತ್ರನೆಲೆಗೆ ನಾಡವೈದ್ಯವು ಏರುತ್ತದೆ. ಆಗ ಅದು ಆಯುರ್ವೇದವಾಯಿತು.

# ೨. ಆಯುರ್ವೇದ ಎಂದರೇನು ?

ಆಯುರ್ವೇದವೆಂದರೆ ಆಯುಸ್ಸಿನ ವೇದ. ಆಯುಸ್ಸೆಂದ
ರೇನು ? ಬದುಕು. ಯಾರ ಬಾಳಿನಲ್ಲಾದರೂ ಒದಗಿಬರುವ
ಹಿತ (ಎಂದರೆ ಒಳಿತು), ಅಹಿತ (ಕೆಡುಕು), ಸುಖ, ದುಃಖ
ಇವುಗಳ ಒಕ್ಕೂಟವನ್ನೇ ಬದುಕು ಎನ್ನುವುದು. ಒಳಿತು
ಎಂದರೆ ಬದುಕಿಗೆ ನೆರವಾಗುವ ವಿವರಗಳು. ಬದುಕುವುದ
ಏತಕ್ಕೆ ? ಧರ್ಮ, ಕಾಮ, ಅರ್ಥ ಈ ಮೂರು ಗುರಿಗಳನ್ನು
ಮುಟ್ಟಲೆಂದಲ್ಲವೆ ? ಈ ಗುರಿಗಳನ್ನು ಮುಟ್ಟಬೇಕಾದರ
ದೇಹ ಗಟ್ಟಿಯಾಗಿರಬೇಕು, ಮನಸ್ಸು ನೆಮ್ಮದಿಯಿಂದ ಇರ
ಬೇಕು. ಇರುವಷ್ಟು ಕಾಲವೂ ರೋಗವಿಲ್ಲದೆ ನೆಮ್ಮದಿಯಿಂದ
ಇರಬೇಕು. ಇದೇ ಹಿತ. ಬದುಕಿನಲ್ಲಿ ಅಡಚಣೆಗಳನ್ನು
ತಂದೊಡ್ಡುವುದು, ಮೈಯೂ ಮನಸ್ಸೂ ಬಳಲುವಂತೆ ಮಾಡ
ವುದು, ಗುರಿಗಳನ್ನು ಮುಟ್ಟಲಾರದಂತೆ ದೂರವಿರಿಸುವುದ
ಅಹಿತ. ಸುಖ, ದುಃಖಗಳು ಹಿತ, ಅಹಿತಗಳನ್ನು ಅನುಸರಿಸ
ಕೊಂಡು ಬರುವ ಮನೋಧರ್ಮಗಳು ತಾನೆ ? 'ಆಯುಹಿ
ತಾಹಿತಂ' ಎಂದು ಆಯುರ್ವೇದದ ಒಕ್ಕಣೆ.

'ವೇದ' ವೆಂದರೆ ತಿಳಿದುಕೊಳ್ಳುವುದು, ಪಡೆದುಕೊಳ
ವುದು. ಆಯುಸ್ಸಿನ ಬಗೆಗಳನ್ನು, ವಿವರಗಳನ್ನು, ಆಗತ
ಗಳನ್ನು ತಿಳಿಯಪಡಿಸುವುದು ಆಯುರ್ವೇದ. ಆಯುಸ್ಸೆಂದ
ಹಿತಾಹಿತ ; ಹಿತಾಹಿತಗಳೆಂದರೆ ಆರೋಗ್ಯ ಮತ್ತು ರೋಗ

ಇವುಗಳನ್ನು ಕುರಿತ ತಿಳುವಳಿಕೆ ಆಯುರ್ವೇದವೆಂದಾಯಿತು. ಇರುವ ಆರೋಗ್ಯವನ್ನು ಉಳಿಸಿಕೊಳ್ಳಲು, ಒದಗಿರುವ ರೋಗವನ್ನು ಹೋಗಲಾಡಿಸಲು ನಾವು ಯತ್ನಿಸುವುದು ಆಯುಸ್ಸೆಂಬ ಮಾತಿನ ತಾತ್ಪರ್ಯ. ಈ ದೃಷ್ಟಿಯಿಂದ ಆಯುಸ್ಸನ್ನು ಪಡೆದುಕೊಳ್ಳಲು ನೆರವಾಗುವುದು ಆಯುರ್ವೇದ. 'ಅನೇನ ಪುರುಷಃ ಆಯುರ್ವಿಂದತಿ ವೇತ್ತಿ ಚ' ಎನ್ನುವ ನಿರೂಪಣೆಯಿದೆ. ಈ ಶಾಸ್ತ್ರದಿಂದ ಜನರು ಆಯುಸ್ಸನ್ನು ಅರಿತುಕೊಳ್ಳುತ್ತಾರೆ, ಪಡೆದುಕೊಳ್ಳುತ್ತಾರೆ ; ಹಾಗೆ ಇದು ಆಯುರ್ವೇದ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳಂತೆ ಇದೂ ಒಂದು ವೇದವೆ ? ಇದು ಐದನೆಯ ವೇದವೆಂದು ಸಂಬಿದ್ದವರೂ ಇದ್ದರು. ಋಗ್ವೇದಕ್ಕೆ ಉಪವೇದವೆಂದು ಬಗೆದಿದ್ದವರೂ ಇದ್ದರು. ಆದರೆ ಬಹುಮಟ್ಟಿಗೆ ಅಥರ್ವವೇದದ ಉಪಾಂಗ ಅಥವಾ ಉಪವೇದ ಎಂಬ ಭಾವನೆ ಬೇರೂರಿದೆ. ಅಥರ್ವವೇದದಲ್ಲಿ ಮನುಷ್ಯನು ಅನುಭವಿಸುವ ನೂರಾರು ಬವಣೆಗಳ ಪ್ರಸ್ತಾಪ ಬರುತ್ತದೆ ; ಮನುಷ್ಯನನ್ನು ಕಾಡುವ ರೋಗ-ರುಜಿನಗಳನ್ನು ತೊಲಗಿಸಿಕೊಳ್ಳುವ ಉಪಾಯಗಳು ಬರುತ್ತವೆ; ಮನುಷ್ಯನನ್ನು ಬೆದರಿಸಿ ಅವನ ನೆಮ್ಮದಿಯನ್ನು ಕದಡುವ ಹತ್ತಾರು ಉಪದ್ರವಗಳನ್ನು ಹತ್ತಿಕ್ಕುವ ಬಗೆಗಳನ್ನು ಹೇಳಿದೆ. ಅಥರ್ವವೇದದ ಉದ್ದೇಶವೇ ಇದು ಎಂಬಂತೆ ತೋರುತ್ತದೆ. ಇಲ್ಲಿ ನೆಮ್ಮದಿಗೆ ಮಣಿ, ಮಂತ್ರ ಮೊದಲಾದುವನ್ನೂ ರೋಗ ಪ್ರತೀಕಾರಕ್ಕೆ ಔಷಧಿಗಳನ್ನೂ ಹೆಚ್ಚಾಗಿ ಹೇಳಿದ್ದಾರೆ. ಈ ವೇದದ 'ಭೈಷಜ್ಯ' ಎಂಬ ಭಾಗವೇ ಆಯುರ್ವೇದದ ಬೆಳವಣಿಗೆಗೆ ಆಸರೆಯಾಯಿತು.

ಆದುದರಿಂದ ಆಯುರ್ವೇದವನ್ನು ಅಥರ್ವವೇದಕ್ಕೆ ಸೇರಿ
ಉಪವೇದ ಎಂದು ಕರೆಯುತ್ತಾರೆ.

ಆಯುರ್ವೇದವೆನ್ನುವ ಮಾತೇನೋ ಯಾವ ವೇ
ದಲ್ಲಿಯೂ ಬರುವುದಿಲ್ಲ. ವೇದವಾಙ್ಮಯದಲ್ಲಿ ವೈದ್ಯವನ
ಭೇಷಜ, ಭೇಷಜ್ಯ ಎಂದೇ ಕರೆದಿರುವುದು. ಮಹಾಭಾರತದ
ಆಯುರ್ವೇದವೆನ್ನುವ ಮಾತನ್ನು ಬಳಸಿರುವುದಿದೆ. ಬೌ
ಆಗಮಗಳನ್ನು ಸಿದ್ಧಪಡಿಸಿದವರಿಗೂ ಈ ಮಾತಿನ ಪರಿಚ
ವಿದ್ದಿತು. ಕ್ರಿಸ್ತಪೂರ್ವ ಒಂದೆರಡು ಶತಮಾನಗಳಲ್ಲಿ
ಮಾತು ತುಂಬ ಬಳಕೆಗೆ ಬಂದಂತೆ ತೋರುತ್ತದೆ. ನಾಡಿನಲ್ಲಿ
ಆರೋಗ್ಯವನ್ನು ಕಾಪಾಡಿಕೊಳ್ಳುವ, ರೋಗಗಳಿಗೆ ಮದ
ಮಾಡುವ ಹಲವು ಸಂಪ್ರದಾಯಗಳೆಲ್ಲ ಕೂಡಿಕೊಂಡು ಆಯ
ರ್ವೇದವೆಂಬ ಹೆಸರಿನಿಂದ ಉಳಿದುಕೊಂಡುವು. ಇಡೀ ನಾಡಿ
ಸಂಸ್ಕೃತಿಯ ಆಸರೆ ಒಂದಾದಂತೆ, ಆಯುರ್ವೇದವೂ ಒಂದ
ಯಿತು. ಆಯುರ್ವೇದವೆನ್ನುವುದು ದೇಶದ ಪ್ರಾಂತ್ಯಗ
ವಿಂಗಡಣೆಯನ್ನು ಮೀರಿ, ಎಲ್ಲ ಜನರಿಗೂ ಒಪ್ಪಾಗಿರುವ ವೈ
ಪದ್ಧತಿ. ಕಾಶ್ಮೀರದಿಂದ ಕೇರಳದವರೆಗೆ, ಗುಜರಾತಿನಿಂ
ಬಂಗಾಳದವರೆಗೆ ಒಂದೇ ಬಗೆಯಾಗಿ ಹರಡಿಕೊಂಡಿರುವ ವೈದ
ಪದ್ಧತಿ ಇದು.

ನಮ್ಮ ದೇಶದಲ್ಲಿ ಮಾತ್ರವಲ್ಲದೆ ನೆರೆಯ ದೇಶಗಳಾ
ನೇಪಾಳ, ಟಿಬೆಟ್ಟು, ಬರ್ಮ, ಶ್ರೀಲಂಕ, ಇಂಡೋನೇಶ
ಇಲ್ಲೆಲ್ಲ ಆಯುರ್ವೇದ ಬಳಕೆಗೆ ಬಂದಿತು. ದೂರ ದೇಶ
ಳಾದ ಅಲೆಗ್ಸಾಂಡ್ರಿಯ, ಅರೇಬಿಯ, ಪರ್ಶಿಯ, ತುರ್ಕಿಸ್ತಾ

ಚೀಣ, ಮಂಗೋಲಿಯ ಈ ದೇಶಗಳಲ್ಲಿಯೂ ಆಯುರ್ವೇದದ ಪ್ರಭಾವವನ್ನು ಗುರುತಿಸಬಹುದು.

ಹೀಗೆ ನಮ್ಮ ದೇಶದಲ್ಲಿಯೂ ಹೊರದೇಶದಲ್ಲಿಯೂ ಹರಡಿಕೊಂಡ ಆಯುರ್ವೇದವು ಎಂಟು 'ಅಂಗ'ಗಳಿಂದ ಕೂಡಿಕೊಂಡಿದ್ದೆಂದು ಹೆಸರಾಗಿದೆ ; 'ಅಷ್ಟಾಂಗ-ಆಯುರ್ವೇದ' ಎನ್ನುವ ನಿರ್ದೇಶನ ಮಹಾಭಾರತದಲ್ಲಿಯೇ ಬರುತ್ತದೆ; ಆಯುರ್ವೇದ ಶಾಸ್ತ್ರದ ಪ್ರವರ್ತಕರೆಂದು ಪ್ರಸಿದ್ಧರಾದ ಚರಕ, ಸುಶ್ರುತ ಮತ್ತು ವಾಗ್ಭಟರ ಗ್ರಂಥಗಳಲ್ಲಿಯೂ ಬರುತ್ತದೆ. ಸಾಮಾನ್ಯವಾಗಿ ದೇಹಕ್ಕೆ ಒದಗುವ ರೋಗಗಳ ಚಿಕಿತ್ಸೆಯನ್ನು ಕುರಿತ 'ಕಾಯ ಚಿಕಿತ್ಸೆ'; ದೇಹದೊಳಗೆ ಬಲವಂತವಾಗಿ ಸೇರಿಕೊಂಡ ಪದಾರ್ಥಗಳನ್ನು ಹೊರ ತೆಗೆಯುವ, ಮತ್ತು ಶಸ್ತ್ರಗಳನ್ನು ಬಳಸಿ ರೋಗ ಗಳನ್ನು ಗುಣಪಡಿಸುವ 'ಶಲ್ಯತಂತ್ರ'; ಕಣ್ಣು, ಕಿವಿ, ಮೂಗು ಮೊದಲಾದ ಊರ್ಧ್ವಾಂಗಗಳ ರೋಗಗಳನ್ನು ಕುರಿತ 'ಶಾಲಾಕ್ಯ ತಂತ್ರ'; ಮನೋರೋಗಗಳನ್ನೂ ಆವೇಶ-ಉನ್ಮಾದಗಳನ್ನೂ ಗುಣಪಡಿಸಲೆಂದು 'ಭೂತ ವಿದ್ಯೆ'; ಮಕ್ಕಳ ಕಾಯಿಲೆಗಳನ್ನು ಕುರಿತ 'ಕೌಮಾರ ಭೃತ್ಯ'; ಹಾವು ಮೊದಲಾದ ಪ್ರಾಣಿಗಳ ಮತ್ತು ಸಸ್ಯ-ಲೋಹಗಳ ವಿಷವನ್ನು ದೇಹದಿಂದ ಹೊರ ಹಾಕುವ 'ಅಗದ ತಂತ್ರ'; ಕ್ಷೀಣವಾದ ದೈಹಿಕ ಸತ್ತ್ವವನ್ನು ಬಲಗೊಳಿಸುವ, ಮುಪ್ಪನ್ನು ತಡೆಗಟ್ಟುವ 'ರಸಾಯನ'; ಮತ್ತು ಸೊರಗಿ ನಿಂತ ಲೈಂಗಿಕ ಸಾಮರ್ಥ್ಯವನ್ನು ಉತ್ತೇಜನ ಗೊಳಿಸುವ 'ವಾಜೀಕರಣ' ಇವು ಆಯುರ್ವೇದದ ಎಂಟು ವಿಭಾಗಗಳು.

ಒಂದೊಂದು ವಿಭಾಗವೂ ಚೆನ್ನಾಗಿ ಬೆಳೆದಿದ್ದು
ಒಂದೊಂದರಲ್ಲೂ ಹಲವಾರು ಗ್ರಂಥಗಳಿದ್ದುವು. ಆಯ
ವಿಭಾಗದಲ್ಲೇ ನಿಪುಣರಾದ ವೈದ್ಯರೂ ಇರುತ್ತಿದ್ದರು. ಆದ
ಕಾಲಕ್ರಮದಲ್ಲಿ ಕಾಯಚಿಕಿತ್ಸೆಯೊಂದೇ ಮುಖ್ಯವಾಗಿ ಉಳಿದ
ಕೊಂಡಿತು. ಉಳಿದ ಅಂಗಗಳು ಅಲ್ಲಲ್ಲಿ, ಅಷ್ಟಿಷ್ಟು ಬಳ
ಯಲ್ಲಿದ್ದುವು ಅಷ್ಟೆ. ಆಯುರ್ವೇದದ ಪ್ರಧಾನ ಸಂಪ್ರದಾಯ
ದಲ್ಲಿ ಎರಡು ಕವಲುಗಳು—ಆತ್ರೇಯ ಸಂಪ್ರದಾಯ ಮತ್ತು
ಧಾನ್ವಂತರ ಸಂಪ್ರದಾಯವೆಂದು. ಮೊದಲನೆಯದು ಚರಕ
ಸಂಹಿತೆಯಲ್ಲಿಯೂ ಎರಡನೆಯದು ಸುಶ್ರುತನ ಸಂಹಿ
ಯಲ್ಲಿಯೂ ಎದ್ದು ಕಾಣುತ್ತವೆ. ಇವೆರಡೂ ಕ್ರಿಸ್ತಪೂರ್ವ
ಯುಗದಲ್ಲಿಯೇ ಸಿದ್ಧವಾದ ಸಂಹಿತೆಗಳು. ಆತ್ರೇಯ ಸಂಪ್ರ
ದಾಯವು ಕಾಯಚಿಕಿತ್ಸೆಗೆ ಹೆಸರಾದದ್ದು, ಧಾನ್ವಂತರ ಸಂಪ್ರ
ದಾಯವು ಶಸ್ತ್ರ ಚಿಕಿತ್ಸೆಗೆ. ಈಚೆಗೆ ಆಯುರ್ವೇದದ ಶಸ್ತ್ರ
ಚಿಕಿತ್ಸೆಯು ಬಹುಮಟ್ಟಿಗೆ ಮರೆಯಾಗಿದೆ. ಕಾಯ ಚಿಕಿತ್ಸೆ
ಯೊಂದೇ ಉಳಿದುಬಂದಿರುವುದು. ಉಳಿದ ಏಳು ಅಂಗಗಳು
ತಕ್ಕಮಟ್ಟಿಗೆ ಇವರಲ್ಲೇ ಸೇರಿಕೊಂಡುಬಿಟ್ಟಿವೆ.

ಚರಕ ಸುಶ್ರುತರನ್ನು ಬಿಟ್ಟರೆ ಆಯುರ್ವೇದ ಶಾಸ್ತ್ರ
ವನ್ನು ಗಟ್ಟಿಯಾದ ತಳಪಾಯದ ಮೇಲೆ ನಿಲ್ಲಿಸಿದವನ
ವಾಗ್ಭಟ; ಆರು ಅಥವಾ ಏಳನೆಯ ಶತಮಾನದಲ್ಲಿದ್ದವನು
ಇವನು ಬರೆದ 'ಅಷ್ಟಾಂಗ ಹೃದಯ' ಮತ್ತು 'ಅಷ್ಟಾಂ
ಸಂಗ್ರಹ' ದೇಶದಲ್ಲೆಲ್ಲ ಇಂದು ಬಳಕೆಯಲ್ಲಿರುವ ಆಯುರ್ವೇ
ವನ್ನು ಮೈದುಂಬಿಸಿದುವು. ಚರಕ, ಸುಶ್ರುತ ಮತ್ತು ವಾಗ್ಭ
ಇವರ ಗ್ರಂಥಗಳನ್ನು 'ಆಯುರ್ವೇದತ್ರಯಿ' ಎಂದು ಕರೆಯು

ವಾಡಿಕೆಯಿದೆ. ಮುಂದೆ ಎಂಟನೆಯ ಶತಮಾನದಲ್ಲಿ ಸಿದ್ಧವಾದ 'ಮಾಧವ ನಿದಾನ' (ಅಥವಾ 'ರುಗ್ವಿನಿಶ್ಚಯ'), ೧೩೧೬ರ ಸುಮಾರಿಗೆ ಮೈದಳೆದ 'ಶಾರ್ಙಧರ ಸಂಹಿತೆ' ಮತ್ತು ೧೫೫೦ ರಲ್ಲಿ ಸಿದ್ಧವಾದ 'ಭಾವಪ್ರಕಾಶ' ಇವು ಆಯುರ್ವೇದಕ್ಕೆ ಪ್ರಮಾಣ ಗ್ರಂಥಗಳಾದುವು. ಇವೆಲ್ಲವೂ ಚರಕ-ಸುಶ್ರುತರ ಜಾಡನ್ನು ಹಿಡಿದವೇ.

ಆಯುರ್ವೇದ ಸಂಪ್ರದಾಯವು ನಾಡಿನಲ್ಲಿ ಊರಿಯಲು, ಬೆಳೆಯಲು, ಜನರಲ್ಲಿ ಹರಡಲು ವೈದಿಕರೂ, ಬೌದ್ಧರೂ, ಜೈನರೂ, ಯೋಗಿಗಳೂ, ನಾಥಸಿದ್ಧರೂ, ತಾಂತ್ರಿಕರೂ ಸಮಾನವಾಗಿಯೇ ನೆರವಾಗಿದ್ದಾರೆ. ದೇಶದ ಎಲ್ಲ ಪ್ರಾಂತ್ಯಗಳಲ್ಲಿಯೂ ಚರಕ, ಸುಶ್ರುತ, ವಾಗ್ಭಟರ ಗ್ರಂಥಗಳನ್ನು ಪ್ರಾಂತ್ಯ ಭಾಷೆಗಳಿಗೆ ಅನುವಾದಮಾಡಿಕೊಂಡು ಅದೇ ಸಂಪ್ರದಾಯದಂತೆ ವೈದ್ಯವನ್ನು ಅಭ್ಯಾಸಮಾಡುವ ವಾಡಿಕೆ ಬಂದಿದೆ. ಬಂಗಾಳದಲ್ಲಿ ರಸ ಚಿಕಿತ್ಸೆ, ಕೇರಳದಲ್ಲಿ ವಿಷ ವೈದ್ಯ ಹೀಗೆ ಕೆಲವೊಂದು ವಿಶೇಷಗಳು ಕೆಲವು ಪ್ರಾಂತ್ಯಗಳಲ್ಲಿ ಕಂಡುಬಂದರೂ ಚರಕ-ಸುಶ್ರುತ-ವಾಗ್ಭಟರು ಎತ್ತಿ ಹಿಡಿದ ಸಂಪ್ರದಾಯವೇ ಎಲ್ಲ ಕಡೆಯೂ ಬಳಕೆಯಲ್ಲಿರುವುದು. ಜನತೆಯ ಜೀವನ ಕ್ರಮಕ್ಕೆ ಇದು ಒಗ್ಗಿರುವುದರಿಂದಲೂ, ಶಾಸ್ತ್ರವು ಜಾನಪದ ಚೌಕಟ್ಟನ್ನು ಬಿಡದೆ ಇರುವುದರಿಂದಲೂ ಈ ಆಯುರ್ವೇದ ಸಂಪ್ರದಾಯ ಜನರಲ್ಲಿ ಹರಡಿಕೊಂಡಿತು.

## ೩. ಶರೀರ ಮತ್ತು ರೋಗ

ಯಾವುದೇ ವೈದ್ಯವಾಗಲಿ ಶರೀರದ ಸ್ವರೂಪ, ಸ್ವಭಾ
ಗಳು ಏನು ಎಂಬುದನ್ನು ಅರಿತುಕೊಳ್ಳಬೇಕಲ್ಲವೆ ? ಹಾ
ಅರಿತು ಕೊಂಡಾಗಲೇ ರೋಗ ಬರುವುದು ಹೇಗೆ, ರೋ
ಬೇರೂರಿಕೊಳ್ಳುವುದು ಹೇಗೆ, ರೋಗ ಕಾಣಿಸಿಕೊಳ್ಳುವುದ
ಹೇಗೆ, ಶರೀರದಿಂದ ರೋಗವನ್ನು ತೊಲಗಿಸುವುದು ಹೇ
ಎಂಬುದು ತಿಳಿಯಬರುವುದು. ಚಿಕಿತ್ಸೆಯು ಫಲಕಾ
ಯಾಗಲು ರೋಗವನ್ನೂ ತಿಳಿದಿರಬೇಕು, ವೈದ್ಯವನ್ನೂ ತಿ
ದಿರಬೇಕು. ಎರಡರ ತಿಳುವಳಿಕೆಯೂ ಚೊಕ್ಕವಾಗುವುದ
ಶರೀರದ ರಚನೆಯನ್ನೂ ಕೆಲಸವನ್ನೂ ಅರಿತುಕೊಂಡಾಗಲೇ.

ಶರೀರದ ಹೊರಕಾಣುವ ಅಂಗ–ಉಪಾಂಗಗಳು, ಒ
ಗಿರುವ ಮೂಳೆ, ಮಾಂಸ ಮೊದಲಾದ ವಿವರಗಳು, ಇನ
ಆಳವಾಗಿರುವ ನರ, ಸ್ನಾಯು ಮೊದಲಾದುವು ಇಷ್ಟನ
ಪಟ್ಟಿ ಮಾಡಿದರೆ ಶರೀರವನ್ನು ತಿಳಿದುಕೊಂಡಂತಾಗಲಿ
ಶರೀರದ ಸ್ಥೂಲ ಸ್ವರೂಪವನ್ನು ತಿಳಿದುಕೊಳ್ಳಲು ಇ
ನೆರವಾಗಬಹುದು ; ಇದರಿಂದ ಶರೀರದ ಸೂಕ್ಷ್ಮ ಸ್ವರೂ
ವಾಗಲೀ ಸ್ವಭಾವವಾಗಲೀ ಸ್ಪಷ್ಟವಾಗುವುದಿಲ್ಲ. ಹಾಗೆಯೆ
ರೋಗ ಹೊರಗೆ ಕಾಣಿಸಿಕೊಳ್ಳುವ ಕೆಲವು ಬಗೆಗಳನ್ನು ಅರಿ
ಕೊಂಡರೆ ರೋಗದ ಸ್ವರೂಪ ಅಷ್ಟಿಷ್ಟು ತಿಳಿದೀತು ; ಆದ
ರೋಗದ ನಿಜಸ್ವರೂಪವಾಗಲೀ ಸ್ವಭಾವವಾಗಲೀ ತಿಳಿ

ಬರಲಾರದು. ರೋಗದ ಹೊರಲಕ್ಷಣಗಳನ್ನು ಮಾತ್ರ ಹೋಗಲಾಡಿಸಿದರೆ ರೋಗವೇ ಮರೆಯಾಯಿತು ಎನ್ನಬಾರದು. ರೋಗವನ್ನು ದಿಟವಾಗಿ ಹೋಗಲಾಡಿಸುವುದು ಅದರ ಬೇರನ್ನು ಕಿತ್ತುಹಾಕಿದಾಗಲೇ. ರೋಗದ ಬೇರು ಎಲ್ಲಿದೆ, ಹೇಗಿದೆ ಎಂದು ವೈದ್ಯನು ಅರಿತುಕೊಳ್ಳಬೇಕೆಂದರೆ ಶರೀರದ ಸ್ವಭಾವ ವನ್ನು ಕಂಡುಕೊಳ್ಳಬೇಕು.

ಶರೀರದ ಸ್ವಭಾವದಲ್ಲಿಯೇ ರೋಗವನ್ನು ತಂದು ಕೊಳ್ಳುವ ಗುಣವೂ ಇದೆ, ರೋಗವನ್ನು ಪರಿಹರಿಸಿಕೊಳ್ಳುವ ಗುಣವೂ ಇದೆ. ಶರೀರದ ಸ್ವಭಾವದ ಬಲಕ್ಕಿಂತಲೂ ರೋಗದ ಬಲವೇ ಹೆಚ್ಚಾದರೆ ಆಗಲೇ ರೋಗ ಕಾಡುವುದು ; ಒದಗಿಬಂದ ರೋಗವನ್ನು ಶರೀರದ ಸ್ವಭಾವವೇ ತಡೆಗಟ್ಟು ವಂತಾದರೆ ಆ ರೋಗಕ್ಕೆ ಚಿಕಿತ್ಸೆಯನ್ನು ಮಾಡುವ ಅಗತ್ಯ ವಿರದು. ರೋಗವು ಶರೀರದ ಸ್ವಭಾವವನ್ನು ಎದುರಿಸಿ ಅದರ ಬಲವನ್ನು ಕುಂದಿಸಿದಾಗ ವೈದ್ಯನು ಶರೀರದ ಸ್ವಭಾ ವಕ್ಕೆ ನೆರವಾಗಬೇಕು. ಚಿಕಿತ್ಸೆಯೆಂದರೆ ಇದೇ ; ಶರೀರದ ಸ್ವಭಾವವು ತಾನಾಗಿ ರೋಗವನ್ನು ಹೊಡೆದಟ್ಟುವಂತೆ ನೆರ ವಾಗುವುದು. 'ಯೋಗಕ್ಷೇಮೌ ಶರೀರಸ್ಯ ಸ್ವಭಾವ ಪರಿ ಕಲ್ಪಿತೌ। ಸ್ವಭಾವಸ್ಯ ತು ಸಾಹಾಯ್ಯಂ ಕರ್ತವ್ಯಂ ಭಿಷಗು ತ್ತಮೈಃ॥' ಎನ್ನುವ ಶ್ಲೋಕ ಇದೇ ಅರ್ಥವನ್ನು ಹೇಳು ತ್ತದೆ.

ಶರೀರದ ರಚನೆ ಮತ್ತು ಸ್ವಭಾವಗಳನ್ನು ಅರಿತುಕೊಳ್ಳ ಬೇಕಾದರೆ ತತ್ತ್ವಜ್ಞಾನದ ಆಸರೆ ಅಗತ್ಯವಾಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ವೈದ್ಯ ಬೆಳೆದದ್ದು ತತ್ತ್ವಜ್ಞಾನದ

ಯಾವ ನೆಂಟೂ ಇರದೆ. ಗ್ರೀಕ್ ವೈದ್ಯಕ್ಕಿದ್ದ ಅಲ್ಪಸ್ವ
ತಾತ್ತ್ವಿಕ ಹಿನ್ನಲೆಯೂ ಮಧ್ಯಯುಗದಲ್ಲಿ ಮರೆಯಾಯಿತ
ಈಗ ಆ ವೈದ್ಯರಿಗೂ ದರ್ಶನಕ್ಕೂ ಯಾವ ಸಂಬಂಧವೂ ಇ
ಆದರೆ ಆಯುರ್ವೇದಕ್ಕೆ ಮೊದಲಿಂದಲೂ ಸಿದ್ಧಾಂತದ ಬೆಂಬ
ವಿದೆ ; ದರ್ಶನದ ಚೌಕಟ್ಟಿನಲ್ಲಿ ಸ್ಪಷ್ಟವಾದ ವಿವರಗಳ ಮೇ
ಈ ವೈದ್ಯವು ನಿಂತಿರುವುದು. ಆಯುರ್ವೇದ ಒಪ್ಪಿಕೊಂಡಿ
ವುದು ನಮ್ಮ ಷಡ್ದರ್ಶನಗಳಲ್ಲಿ ತುಂಬ ಹಳೆಯದೂ ಆಧಾ
ಭೂತವೂ ಆದ ಸಾಂಖ್ಯ ದರ್ಶನವನ್ನು. ಈ ದರ್ಶನ
ಬೌದ್ಧ, ಜೈನ, ಯೋಗ, ವೇದಾಂತ ಮೊದಲಾದ ದರ್ಶನ
ಮೂಲ ಪ್ರಕ್ರಿಯೆಗಳನ್ನು ಒದಗಿಸಿರುವುದು. ಇದರ ಜೊತೆ
ಆಯುರ್ವೇದವು ನ್ಯಾಯ–ವೈಶೇಷಿಕ ದರ್ಶನಗಳನ್ನೂ ಅ
ವಡಿಸಿಕೊಂಡಿದೆ.

ಸಾಂಖ್ಯ, ನ್ಯಾಯ, ವೈಶೇಷಿಕ ದರ್ಶನಗಳಲ್ಲಿ ಪಾ
ಹೊಕ್ಕಾಗಿ ಬರುವ ಪ್ರಕೃತಿ, ಪುರುಷ, ದ್ರವ್ಯ, ಗುಣ, ಕರ್ಮ
ಮೊದಲಾದ ಕಲ್ಪನೆಗಳು ಆಯುರ್ವೇದ ಪ್ರಕ್ರಿಯೆಗಳಾಗಿ
ಮುಖ್ಯವಾಗಿ ಆಯುರ್ವೇದದ ಅಡಿಗಲ್ಲಾಗಿರುವುದು ಪಾಂ
ಭೌತಿಕ ತತ್ತ್ವ. ಇದನ್ನು ಭಾರತೀಯ ದರ್ಶನಗಳೆಲ್ಲವೂ ಒ
ಕೊಂಡಿವೆಯಾಗಿ ಆಯುರ್ವೇದದ ಅಡಿಗಲ್ಲು ಗಟ್ಟಿಯಾಗಿ
ಇದರಂತೆಯೇ ಇರುವ ತ್ರಿಗುಣ ಸಿದ್ಧಾಂತವನ್ನೂ ಆಯು
ರ್ವೇದ ಆಸರೆಯಾಗಿ ಒಪ್ಪಿಕೊಂಡಿದೆ. ಪಾಂಚಭೌತಿಕ ತತ್ತ್ವ
ತ್ರಿಗುಣ ಸಿದ್ಧಾಂತ ಎರಡನ್ನು ಅರಿತುಕೊಳ್ಳದಿದ್ದರೆ ಆಯು
ರ್ವೇದದ ನಿಲುವು ಅರ್ಥವಾಗುವುದಿಲ್ಲ.

ಪ್ರಪಂಚದಲ್ಲಿರುವ ಪದಾರ್ಥಗಳೆಲ್ಲ ಐದು 'ಭೂತ'ಗಳ ಒಕ್ಕೂಟ. 'ಭೂತ' ವೆನ್ನುವುದು ಪಾರಿಭಾಷಿಕ ಪದ ; ಉಂಟಾಗಿರುವುದು ಎಂದರ್ಥ. ಮೊಟ್ಟಮೊದಲೇ ಇದ್ದು, ಮತ್ತೆ ಯಾವ ಘಟಕಗಳನ್ನೂ ಹೊಂದದೆ, ಉಳಿದೆಲ್ಲ ಪದಾರ್ಥ ಗಳಲ್ಲಿಯೂ ಅಡಗಿಕೊಂಡಿದ್ದು ಎಂದಿಗೂ ಮರೆಯಾಗದೆ ಉಳಿಯುವುವು 'ಮಹಾಭೂತಗಳು'. ನೆಲ, ನೀರು, ಬೆಂಕಿ, ಗಾಳಿ, ಆಕಾಶ ಇವು ಐದು ಮಹಾಭೂತಗಳು. ಬೆಟ್ಟ-ಗುಡ್ಡ ಗಳಾಗಲೀ, ಪ್ರಾಣಿ-ಪಕ್ಷಿಗಳಾಗಲೀ ಮನುಷ್ಯರಾಗಲೀ ಈ ಐದು ಮಹಾಭೂತಗಳಿಂದಲೇ ಮೈದಳೆಯುವುವು. ಇವು ಬೇರೆ ಬೇರೆ ಪ್ರಮಾಣಗಳಲ್ಲಿ ಬೆರೆಯುವುದರಿಂದ ಬೇರೆ ಬೇರೆ ಆಕಾರ, ಬೇರೆ ಬೇರೆ ಸ್ವಭಾವದ ಪದಾರ್ಥಗಳು ಪ್ರಪಂಚದಲ್ಲಿ ತೋರಿಕೊಳ್ಳುತ್ತವೆ. ಪ್ರಪಂಚದಲ್ಲಿ ನಾವು ಕಾಣುವ ವೈವಿಧ್ಯಕ್ಕೆ ಈ ತೆರನಾದ 'ಪಂಚ ಮಹಾಭೂತ ವಿಕಾರ'ವೇ ಕಾರಣ, ಆಸರೆ.

ಮನುಷ್ಯನ ಶರೀರವೂ, ಇತರ ಎಲ್ಲ ಪದಾರ್ಥ ಗಳಂತೆಯೆ, 'ಪಂಚಮಹಾಭೂತ ವಿಕಾರಾತ್ಮಕ'ವಾದುದು. ನೆಲ, ನೀರು, ಬೆಂಕಿ, ಗಾಳಿ ಈ ನಾಲ್ಕು ಮಹಾಭೂತಗಳ ಪರಮಾಣುಗಳು ಆಕಾಶವೆಂಬ ಐದನೆಯ ಮಹಾಭೂತದಲ್ಲಿ (ಆಕಾಶವೆಂದರೆ ಅವಕಾಶ, ಗುಣ ಕರ್ಮಗಳಿಗೆ ಎಡೆ) ಬೆರೆತು ಕೊಂಡಿರುವುದು ಶರೀರ. ಆದರೆ ಚೇತನದ ಸಹಜವಾದ ಶಕ್ತಿಯೇ ಹೀಗೆ ಮಹಾಭೂತಗಳು ಬೆರೆಯುವುದಕ್ಕೆ ಕಾರಣ ವಾದುದರಿಂದ ಶರೀರದಲ್ಲಿ ಚೇತನವು 'ಶರೀರಿ'ಯಂತೆ ಅಡಗಿರುತ್ತದೆ ; 'ಶರೀರಿ' ಯೆಂದರೆ ಶರೀರವನ್ನು ಪಡೆದಿರುವ,

ಶರೀರವನ್ನು ಬಳಸಿಕೊಳ್ಳುವ, ಶರೀರದಿಂದ ಬೇರೆಯಾಗಿರುವ ಚೇತನ. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಕಾಣುವ ಐದು ಭೂತಗಳ ಒಕ್ಕೂಟಕ್ಕೆ ಕಾರಣವಾಗಿ ಬ್ರಹ್ಮತತ್ತ್ವವು ಇರುವಂತೆಯೇ ಶರೀರದಲ್ಲಿ ಚೇತನ; ಉಳಿದೆಲ್ಲ ಪದಾರ್ಥಗಳಂತೆ ಶರೀರ.

ಚೇತನವು ನಿಲ್ಲುವುದಕ್ಕೆ ಆಸರೆಯಾಗಿ, ಐದು ಮಹಾಭೂತಗಳು ಬಗೆ ಬಗೆಯಾಗಿ ಮಾರ್ಪಟ್ಟು, ಒಟ್ಟಾಗಿ ಬೆರೆತಿರುವುದೇ ಶರೀರವೆಂದು ಚರಕನ ಒಕ್ಕಣೆ. ಶರೀರವೆನ್ನುವ ಮಾತಿನಲ್ಲಿ ತಲೆ, ಹೊಟ್ಟೆ, ಬೆನ್ನು, ತೊಡೆ, ತೋಳು ಮೊದಲಾಗಿ ಹೊರ ಕಾಣುವ ಅಂಗಗಳೂ; ಹೃದಯ, ಆಮಾಶಯ, ಯಕೃತ್, ಪ್ಲೀಹ, ಅಸ್ಥಿ (ಮೂಳೆ), ಸ್ನಾಯು, ಮಾಂಸ, ಸಂಧಿ, ಸ್ರೋತಸ್ಸು, ಸಿರಾ, ಧಮನಿ ಮೊದಲಾದ ಒಳಗಿನ ವಿವರಗಳೂ; ಹೊರಗಣ ವಿಷಯಗಳನ್ನು ಅರಿತುಕೊಳ್ಳಲೆಂದು ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಈ ಐದು ಜ್ಞಾನೇಂದ್ರಿಯಗಳೂ ಶರೀರದ ಕೆಲಸವನ್ನು ಮಾಡಲು ಐದು ಕರ್ಮೇಂದ್ರಿಯಗಳೂ (ಹಿಡಿದುಕೊಳ್ಳಲು ಕೈ, ನಡೆಯಲು ಕಾಲು, ಮಾತನಾಡಲು ಬಾಯಿ, ಮಲಗಳನ್ನು ಹೊರದೂಡಲು ಪಾಯು, ಜನನೇಂದ್ರಿಯವಾದ ಉಪಸ್ಥ); ಮತ್ತು ಎರಡೂ ಬಗೆಯ ಇಂದ್ರಿಯಗಳೊಂದಿಗೆ ಇರುವ ಮನಸ್ಸು ಇಷ್ಟೂ ಸೇರುತ್ತವೆ. ಇವೆಲ್ಲ 'ಪಂಚಮಹಾಭೂತ ವಿಕಾರ'ಗಳೇ.

ಇವುಗಳನ್ನು ಪಡೆದುಕೊಂಡು, ಇವನ್ನೆಲ್ಲ ಒಕ್ಕೂಟವಾಗಿಸಿರುವ ಚೇತವನ್ನು 'ಮನಸ್ಸಿನಿಂದ ಕೂಡಿರುವ ಆತ್ಮ'ನೆಂದು ಚಕ್ರಪಾಣಿದತ್ತನು (ಚರಕಸಂಹಿತೆಗೆ ವ್ಯಾಖ್ಯಾನವನ್ನು ಬರೆದವನು) ಒಕ್ಕಣಿಸಿದ್ದಾನೆ. ಹೀಗೆ ಶರೀರ–ಇಂದ್ರಿಯ–ಮನಸ್ಸು

–ಚೇತನ ಇಷ್ಟು ಕೂಡಿಕೊಂಡಿರುವವನೇ 'ಪುರುಷ'. ರೋಗ ಬರುವುದೂ ಅವನಿಗೇ; ಚಿಕಿತ್ಸೆ ನಡೆಯುವುದೂ ಅವನಲ್ಲೇ. ಆಯುರ್ವೇದದಲ್ಲಿ ಇವನಿಗೆ 'ಕರ್ಮಪುರುಷ', ಅಥವಾ 'ಚಿಕಿತ್ಸಾಧಿಕೃತ ಪುರುಷ'ನೆಂದು ಹೆಸರಿದೆ. ಇದರ ತಾತ್ಪರ್ಯ ರೋಗ ಕಾಡುವುದು ಇಡೀ ಒಕ್ಕೂಟವನ್ನು, ರೋಗಕ್ಕೆ ಮದ್ದು ಒಕ್ಕೂಟವನ್ನೇ ಹಿಡಿಯಬೇಕು.

ಶರೀರವೇ ಬೇರೆ, ಇಂದ್ರಿಯಗಳೇ ಬೇರೆ, ಮನಸ್ಸೇ ಬೇರೆ, ಚೇತನವೇ ಬೇರೆ ಎನ್ನುವುದು ಆಯುರ್ವೇದದ ನಿಲುವಲ್ಲ. ರೋಗದ ಕಾರಣವನ್ನು ಕಾಣಬೇಕಾದರಾಗಲೀ, ರೋಗವನ್ನು ಮದ್ದಿನಿಂದ ಸರಿಪಡಿಸಬೇಕಾದರಾಗಲೀ ಶರೀರ, ಇಂದ್ರಿಯ, ಮನಸ್ಸು, ಚೇತನ ಇವನ್ನು ಒಂದುಗೂಡಿಸಿಯೇ ನೋಡಬೇಕು. ಆದ್ದರಿಂದಲೇ ಶರೀರ, ಮನಸ್ಸು, ಚೇತನ ಇವು ಮೂರನ್ನೂ ಸೇರಿಸಿ 'ತ್ರಿದಂಡ'ದಂತೆ ಎನ್ನುವ ಸಾಮತಿಯನ್ನು ಕೊಡುತ್ತಾರೆ. ತ್ರಿದಂಡವೆಂದರೆ ಮೂರು ಕೋಲುಗಳು ಪರಸ್ಪರ ಆಸರೆಯಿಂದ ನಿಲ್ಲುವುದು. ಕೋಲುಗಳಲ್ಲಿ ಯಾವುದೊಂದು ಊನವಾದರೂ ಇನ್ನೆರಡು ಸಮನಾಗಿ ನಿಲ್ಲಲಾರವಲ್ಲವೆ? ಹಾಗೆಯೇ ಶರೀರ, ಮನಸ್ಸು, ಚೇತನ ಇವುಗಳಲ್ಲಿ ಯಾವುದೊಂದು ಸಮನಾಗಿಲ್ಲದಿದ್ದರೂ ರೋಗ ಒದಗುತ್ತದೆ. ಆದರೆ ಚಿಕಿತ್ಸೆ ಮಾಡುವಾಗ ಸಮನಾಗಿಲ್ಲದ ಒಂದು ಅಂಗಕ್ಕೇ ಮಾಡುವುದಿಲ್ಲ; ಇಡೀ 'ತ್ರಿದಂಡ'ಕ್ಕೇ ಮಾಡುವುದು.

ಮೂರೂ ವಿವರಗಳು ಬೆರೆಯುವುದನ್ನು 'ಯೋಗ'ವೆಂದು ಕರೆಯುತ್ತಾರೆ. ಯೋಗವೆನ್ನುವ ಮಾತಿಗೆ ಸೇರಿಸುವುದು, ಬೆರೆಸುವುದು, ಕೂಡಿಸುವುದು ಎಂದರ್ಥ (ಯುಜಿರ್

ಯೋಗೇ). ವಿವರಗಳು ಸಮನಾಗಿ, ಏರುಪೇರಿಲ್ಲದೆ, ಬೆರೆತರ
ಅದು 'ಸಮ್ಯಗ್ಯೋಗ'; ಇದೇ ಆರೋಗ್ಯ. ಬೆರೆಯುವಾಗ
ಕೊರತೆಯುಂಟಾದರೆ ಅದು 'ಹೀನಯೋಗ'; ಅಥವಾ ತೊಂ
ಕುಂಟಾದರೆ ಅದು 'ಮಿಥ್ಯಾಯೋಗ'. ಇಂದ್ರಿಯಗಳ
ಮಾಡುವ ಕೆಲಸ ಶರೀರದ ಅಥವಾ ಮನಸ್ಸಿನ ನೆಮ್ಮದಿಯನ್ನು
ಕೆಡಿಸದಿದ್ದರೆ ಅದು ಸಮ್ಯಗ್ಯೋಗ. ಇಂದ್ರಿಯಗಳ ಕೆಲಸ
ಶರೀರದ ಅಥವಾ ಮನಸ್ಸಿನ ನಿರೀಕ್ಷೆ, ಅಗತ್ಯ, ಸಾಮರ್ಥ್ಯಗಳ
ಗಿಂತ ಹೆಚ್ಚಾಗಿದ್ದರೆ ಅದು ಅತಿಯೋಗವೆನಿಸಿಕೊಳ್ಳುತ್ತದೆ
ಇಂದ್ರಿಯಗಳ ಮತ್ತು ಹೊರಗಣ ವಿಚಾರಗಳ ನಂಟು ತೀರ
ಕಡಮೆಯಾಗಿದ್ದು ಅದರಿಂದ ಶರೀರಕ್ಕೆ ಅಥವಾ ಮನಸ್ಸಿಗ
ಯಾವ ಪ್ರಯೋಜನವೂ ಆಗದಿದ್ದರೆ ಅಯೋಗವೆನಿಸಿಕೊಳ್ಳು
ತ್ತದೆ. ಇಂದ್ರಿಯಗಳ ನೆಮ್ಮದಿಗೇ ತೊಂದರೆಯುಂಟಾಗಿ
ಅದರಿಂದ ಶರೀರದ ಮೇಲೆ ಅಥವಾ ಮನಸ್ಸಿನ ಮೇಲೆ ಅಹಿತ
ವಾದ ಪ್ರಭಾವ ಬೀಳುವುದಾದರೆ ಅದು ಮಿಥ್ಯಾಯೋಗ.

ರೋಗ ಬರುವುದಕ್ಕೆ ಮುಖ್ಯ ಕಾರಣ ಹೀಗೆ ಕರ್ಮ
ಪುರುಷನು ಅರಗಿಸಿಕೊಳ್ಳಲಾಗದಂತೆ, ತನ್ನದಾಗಿ ಮಾಡಿಕೊಳ್ಳ
ಲಾಗದಂತೆ ಇಂದ್ರಿಯಗಳು ಕೆಲಸ ಮಾಡುವುದು. ಇದನ್ನು
ಆಯುರ್ವೇದವು 'ಅಸಾತ್ಮ್ಯೇಂದ್ರಿಯಾರ್ಥಸಂಯೋಗ' ಎಂದು
ಕರೆಯುತ್ತದೆ. ಶರೀರ, ಮನಸ್ಸು, ಇಂದ್ರಿಯಗಳನ್ನು ಬಳಲಿಸಿ,
ಅವುಗಳಿಗೆ ಅಹಿತವಾಗುವಂತೆ ಮಾಡುವ ಎಲ್ಲ ವ್ಯವಹಾರಗಳೂ
ಇದರಲ್ಲಿ ಸೇರುತ್ತವೆ. ರೋಗಕ್ಕೆ ಇನ್ನೊಂದು ಕಾರಣ ಮೈ,
ಮನಸ್ಸು, ಮಾತು ಮೂರರಲ್ಲೂ ಎಚ್ಚರ ತಪ್ಪಿ, ಅಯ ತಪ್ಪಿ
ವಿವೇಕವಿಲ್ಲದೆ ಬದುಕನ್ನು ನಡೆಸುವುದು. ಇದಕ್ಕೆ 'ಪ್ರಜ್ಞಾಪ

ರಾಧ'ವೆಂದು ಹೆಸರು. ರೋಗಕ್ಕೆ ಮೂರನೆಯ ಕಾರಣ ಶರೀರ,
ಮನಸ್ಸು, ಚೇತನಗಳಲ್ಲಿ ಕಾಲ ಅಥವಾ ಕರ್ಮದಿಂದಾಗಿ ಒದ
ಗುವ ಮಾರ್ಪಾಟು; 'ಪರಿಣಾಮ'ವೆನಿಸಿಕೊಳ್ಳುತ್ತದೆ. ಈ
ವಿಚಾರ ಮತ್ತೆ ಮುಂದೆ ಬರುತ್ತದೆ.

## ೪. ತ್ರಿದೋಷವೆಂದರೇನು ?

ಶರೀರವು ದೋಷ, ಧಾತು, ಮಲಗಳ ಒಕ್ಕೂಟ ಎಂ
ಕಲ್ಪನೆಯಿದೆ. ಮೂರೂ ಮಾತುಗಳು ಆಯುರ್ವೇದ ಶಾಸ್ತ್ರ
ದಲ್ಲಿ ಪಾರಿಭಾಷಿಕ ಪದಗಳು; ಅವುಗಳಿಗೆ ಸಾಮಾನ್ಯವಾ
ಅರ್ಥವಿರದೆ ಶಾಸ್ತ್ರಕ್ಕೆ ಒಪ್ಪುವಂಥ ಅರ್ಥವಿರುತ್ತದೆ. ಯಾವುದ
ಶರೀರದ ನೆಮ್ಮದಿಯನ್ನು ಕೆಡಿಸುವ ಶಕ್ತಿಯನ್ನು ಹೊಂ
ದಿಯೋ ಅದು ದೋಷ. ದೋಷವನ್ನು ವಾತ, ಪಿತ್ತ, ಕ
ಎಂದು ಮೂರು ತೆರನಾಗಿ ವಿಂಗಡಿಸುತ್ತಾರೆ. ಧಾತುವೆಂದ
ಶರೀರದ ರಚನೆಯನ್ನು ಎತ್ತಿ ನಿಲ್ಲಿಸುವುದು, ಶರೀರದಲ್ಲಿ ನಡೆ
ಬೇಕಾದ ಕೆಲಸಗಳನ್ನು ಆಗಮಾಡಿಸುವುದು, ಶರೀರದ ಬೆ
ವಣಿಗೆಗೆ ನೆಮ್ಮದಿಗೆ ಕಾರಣವಾಗುವಂಥದು. ಧಾತುಗಳು ಏ
ಬಗೆಯುವು – ರಸ, ರಕ್ತ, ಮಾಂಸ, ಮೇದಸ್ಸು, ಮೂಳೆ, ಮಜ್ಜ
ಶುಕ್ರಗಳೆಂದು. ಇವು ಏಳೂ 'ದೂಷ್ಯ'ಗಳೆನಿಸಿಕೊಳ್ಳುತ್ತವೆ
ಎಂದರೆ ದೋಷಗಳು ಕೆಡಿಸುವುವಾದರೆ, ಧಾತುಗಳು ಕೆಡುವುವ
ಮಲವೆಂದರೆ ಶರೀರದಿಂದ ಹೊರದೂಡಲ್ಪಡಬೇಕಾದ ದ್ರವ
ಗಳು, ಸಾಮಾನ್ಯವಾಗಿ ಮೂರು – ಮೂತ್ರ, ಪುರೀಷ, ಸ್ವೇ
(ಬೆವರು).

ಧಾತು ಮತ್ತು ಮಲ ಇವು ದ್ರವ್ಯಗಳೇ. ಅವನ
ನೋಡಬಹುದು, ದೇಹದಲ್ಲಿ ಅವುಗಳನ್ನು ನಿರ್ದೇಶಿಸಬಹುದ
ದೇಹದಿಂದ ಹೊರಗೂ ಅವನ್ನು ವಿಂಗಡಿಸಿ ತೋರಿಸಬಹುದ

ಆದರೆ ದೋಷಗಳನ್ನು ಹೀಗೆ ನಾವು ನೇರವಾಗಿ ನೋಡಲಾರೆವು, ಬೇರ್ಪಡಿಸಿ ತೋರಿಸಲಾರೆವು. ಆದರೆ ಶರೀರದಲ್ಲಿ ನಡೆಯುವ ಕೆಲಸಗಳಿಂದ ಅವು ಇವೆಯೆಂದು ಊಹಿಸಿಕೊಳ್ಳಬೇಕು. ಅವು 'ಕಾರ್ಯಾನುಮೇಯ'. ಅವು ಮುಖ್ಯವಾಗಿ ಶಕ್ತಿಗಳು. ಅವುಗಳ ಆಸರೆ, ಒತ್ತಾಸೆಗಳಿರದಿದ್ದರೆ ಧಾತುಗಳು ಶರೀರವನ್ನು ಎತ್ತಿ ನಿಲ್ಲಿಸಲಾರವು ; ಮಲಗಳು ಶರೀರದಲ್ಲಿ ಸಮನಾಗಿ ಹುಟ್ಟಿಕೊಳ್ಳಲಾರವು, ಹೊರಗೆ ಹೋಗಲಾರವು.

ದೋಷಗಳನ್ನು ಧಾತು-ಮಲಗಳಂತೆ ದ್ರವ್ಯಗಳೆಂದು ಹೇಳಲಾಗದಿದ್ದರೂ, ಶರೀರದಲ್ಲಿ ಅವಕ್ಕೆ ಸ್ಥಾನಗಳಿವೆ; ಶರೀರದ ರಚನೆಯಲ್ಲಿ ಅವುಗಳ ಕೈವಾಡ ಎದ್ದು ಕಾಣುತ್ತದೆ. ಧಾತು, ಮಲಗಳಂತೆಯೇ ದೋಷಗಳೂ ಐದು 'ಭೂತ'ಗಳಿಂದ ಆದುವೇ. ಅವುಗಳಿಗೆ ಬೇರೆ ಬೇರೆಯಾದ ಗುಣಗಳಿವೆ ; ಅವು ಒಂದೊಂದೂ ಮಾಡುವ ಕೆಲಸಗಳಿವೆ. ಅವು ಮೂರೂ ಬೆರೆಯುವುದೂ ಉಂಟು, ಬೇರೆಯಾಗುವುದೂ ಉಂಟು. ಧಾತು, ಮಲಗಳಿಗಿರುವಂತೆಯೇ ದೋಷಗಳಿಗೂ ಅಳತೆಯಿದೆ. ಇದರಲ್ಲಿ ಏರುಪೇರಾದರೆ ರೋಗ. ಅಳತೆ ಸರಿಯಾಗಿದ್ದರೆ ಆರೋಗ್ಯ. "ರೋಗವೆಂದರೆ ದೋಷಗಳ ಏರುಪೇರು ಅಥವಾ ದೋಷವೈಷಮ್ಯ ; ಆರೋಗ್ಯವೆನ್ನುವುದು ದೋಷಗಳು ಸಮನಾಗಿರುವುದು, ದೋಷಸಾಮ್ಯ" ಇದು ಆಯುರ್ವೇದದ ಮೂಲಸೂತ್ರ. ದೋಷಗಳು ಸಮನಾಗಿದ್ದಾಗ ಅವು ಸಮನಾಗಿಯೇ ಇರುವಂತೆ ನೋಡಿಕೊಳ್ಳುವುದೂ, ದೋಷಗಳಲ್ಲಿ ಏರುಪೇರಾದಾಗ ಅದನ್ನು ಸರಿಪಡಿಸುವುದೂ ಆಯುರ್ವೇದದ ಉದ್ದೇಶ. ಸ್ವಸ್ಥವೃತ್ತ ಮೊದಲನೆಯ ಗುಂಪಿಗೆ ಸೇರಿದುದು; 'ಚಿಕಿತ್ಸೆ' (ಅಥವಾ ಭೈಷಜ್ಯ) ಎರಡನೆಯ ಗುಂಪಿಗೆ ಸೇರುತ್ತದೆ.

ದೋಷಗಳು ಮೂರೆಂದೆವಲ್ಲ, ಅವು ಯಾವುವು ? ವಾತ, ಪಿತ್ತ, ಕಫ (ಅಥವಾ ಶ್ಲೇಷ್ಮ) ಇವೇ ಮೂರು ದೋಷಗಳು. ಪಾಂಚಭೌತಿಕ ಸಿದ್ಧಾಂತದಂತೆ ವಾತವು ಗಾಳಿ, ಆಕಾಶಗಳ ಸೇರ್ಪಡೆಯಿಂದ ಕಾಣಿಸಿಕೊಳ್ಳುತ್ತದೆ; ಈ ಸೇರ್ಪಡೆಯಲ್ಲಿ ಗಾಳಿಯ ಅಂಶವೇ ಹೆಚ್ಚಾಗಿರುವುದರಿಂದ ಈ ದೋಷವನ್ನು 'ವಾತ' (ಎಂದರೆ ಗಾಳಿ) ಎಂದೇ ಕರೆಯುತ್ತಾರೆ. ಬೆಂಕಿಯೊಂದರಿಂದಲೇ ಒದಗುವುದು ಪಿತ್ತ. ನೀರು, ನೆಲ ಎರಡೂ ಬೆರೆತು ತೋರಿಕೊಳ್ಳುವುದು ಕಫ; ಇದರಲ್ಲಿ ನೀರಿನ ಅಂಶ ಹೆಚ್ಚಾಗಿರುತ್ತದೆ. ಹೊರ ಜಗತ್ತಿನಲ್ಲಿ ವಾಯು, ಸೂರ್ಯ, ಚಂದ್ರರಿರುವಂತೆ, ಶರೀರದಲ್ಲಿ ಗಾಳಿ, ಬೆಂಕಿ, ನೀರು ಇವುಗಳ ಪ್ರತಿನಿಧಿಗಳಾಗಿ ವಾತ, ಪಿತ್ತ, ಕಫಗಳು ಕೆಲಸಮಾಡುತ್ತವೆ.

ಧಾತುಗಳಲ್ಲೇ ಮನೆಮಾಡಿಕೊಂಡು, ಧಾತುಗಳಿಂದಲೇ ಬಲವನ್ನು ಪಡೆದುಕೊಳ್ಳುವ ದೋಷಗಳು ದೇಹದಲ್ಲಿ ಎಲ್ಲೆಡೆಯೂ ಹರಡಿಕೊಂಡಿವೆಯಾದರೂ ಮುಖ್ಯವಾಗಿ ಮೂರು ಸ್ಥಾನಗಳೆಂದು ನಿರ್ದೇಶಿಸುತ್ತಾರೆ. ಹೊಕ್ಕುಳಿನಿಂದ ಕೆಳಭಾಗದಲ್ಲಿ ವಾತ, ಹೊಕ್ಕುಳಿನಿಂದ ಎದೆಯವರೆಗೆ (ಅನ್ನಕೋಶದ ಬಲಭಾಗದಲ್ಲಿ) ಪಿತ್ತ, ಎದೆಯ ಮೇಲ್ಭಾಗದಲ್ಲಿ ಕಫ. ವಾತದ ಸ್ಥಾನ ಪಕ್ವಾಶಯವೆಂದೂ, ಪಿತ್ತಸ್ಥಾನವು ಆಮಾಶಯವೆಂದೂ ಕಫದ ಸ್ಥಾನ ಹೃದಯವೆಂದೂ ಗುರುತಿಸುತ್ತಾರೆ. ವಾತದ ಕೆಲಸ ಬಿರುಸಾಗಿರುವುದು ಮುಖ್ಯವಾಗಿ ಪಕ್ವಾಶಯದಲ್ಲಾದರೂ ನಡುವು, ತೊಡೆ, ಎಲುಬುಗಳು, ಚರ್ಮ, ಕಿವಿ ಇಲ್ಲೂ ಅದರ ಕೆಲಸ ನಡೆಯುತ್ತದೆ. ಹಾಗೆಯೇ ಪಿತ್ತದ ಪ್ರಧಾನ ಸ್ಥಾನ ಆಮಾಶಯವಾದರೂ ಹೊಕ್ಕುಳು, ಕಣ್ಣು, ರಕ್ತ, ಬೆವರು

ರಸ ಇವುಗಳಲ್ಲೂ ಅದರ ಕೆಲಸವಿದೆ. ಕಫದ ಕೆಲಸ ಎದೆ, ಕುತ್ತಿಗೆ, ಸಂಧಿಗಳು, ಮೂಗು, ನಾಲಗೆ, ಆಮಾಶಯ, ಮೇದಸ್ಸು ಇವುಗಳಲ್ಲೂ ನಡೆಯುತ್ತದೆ. ಆಯಾ ದೋಷಗಳು ಕೆಟ್ಟರೆ ಈ ಎಡೆಗಳಲ್ಲಿ ಅದರ ಅನುಭವವಾಗುತ್ತದೆ; ಚಿಕಿತ್ಸೆ ನಡೆಯಬೇಕಾದುದೂ ಆಯಾ ಎಡೆಗಳಲ್ಲೇ.

ದೋಷಗಳಿಗೆ ಬೇರೆ ಬೇರೆ ಕೆಲಸಗಳುಂಟು. ವಾತದಿಂದ ಉಸಿರಾಡುವುದು, ಮಾತಾಡುವುದು, ರಕ್ತ ಹರಿದಾಡುವುದು, ರಸವನ್ನು ಶರೀರವಲ್ಲೆಲ್ಲ ಒಯ್ಯುವುದು, ಮಲಮೂತ್ರಗಳು ದೇಹದಿಂದ ಹೊರಹಾಯುವುದು ಇವೆಲ್ಲ ನಡೆಯುತ್ತವೆ. ಪಿತ್ತದಿಂದ ಮೈ ಕಾವಿರುವುದು, ಉಂಡ ಆಹಾರ ಅರಗುವುದು, ನೀರಡಿಕೆ, ಹಸಿವು, ರಕ್ತಕ್ಕೆ ಕೆಂಬಣ್ಣ ಒದಗುವುದು, ಬುದ್ಧಿ ಶಕ್ತಿಯಿರುವುದು, ಕಣ್ಣಿನಲ್ಲಿ ಕಳೆ, ಮೈಹೊಳಪು ಮೊದಲಾದುವೆಲ್ಲ ಜರುಗುತ್ತವೆ. ಕಫದ ಕೆಲಸವೆಂದರೆ ಆಹಾರಕ್ಕೆ ನೀರೂಡಿಸುವುದು, ರುಚಿಯನ್ನು ಕೊಡುವುದು, ಇಂದ್ರಿಯಗಳ ಕೆಲಸದಲ್ಲಿ ನೆರವಾಗುವುದು, ಶರೀರದಲ್ಲಿ ತಣಿವನ್ನು ಒದಗಿಸುವುದು, ಸ್ಥೈರ್ಯವನ್ನು ತಂದುಕೊಡುವುದು ಇತ್ಯಾದಿ.

ಶರೀರವು ಉಳಿಯಬೇಕಾದರೆ, ಬೆಳೆಯಬೇಕಾದರೆ ಆಹಾರ ಬೇಕಷ್ಟೆ. ಆಹಾರವನ್ನು ಅರಗಿಸಿಕೊಂಡು ಶರೀರದಲ್ಲೆಲ್ಲ ಅದರ ಸತ್ತ್ವವನ್ನು ಹರಡಬೇಕೆಂದರೆ 'ಜಠರಾಗ್ನಿ'ಯೆಂಬ ಕಲ್ಪನೆಯನ್ನು ಆಯುರ್ವೇದ ಮಾಡಿಕೊಂಡಿದೆ. 'ಹೊಟ್ಟೆಯಲ್ಲಿರುವ ಉರಿ' ಎಂದು ಈ ಮಾತಿನ ಅರ್ಥ. 'ಹೊಟ್ಟೆಯುರಿ' ಎಂಬ ವಾಡಿಕೆಯ ಅರ್ಥವನ್ನು ಇದಕ್ಕೆ ಹಚ್ಚಬಾರದು! ಮೂರೂ ದೋಷಗಳೂ ಸಮನಾಗಿದ್ದರೆ ಈ ಜಠರಾಗ್ನಿಯು 'ಸಮಾಗ್ನಿ'

ಎನಿಸಿಕೊಳ್ಳುತ್ತದೆ. ಉಂಡ ಆಹಾರ ಚೆನ್ನಾಗಿ ಅರಗಿ, ದೇಹ
ಬಲವೂ ಉತ್ಸಾಹವೂ ಬರುತ್ತವೆ. ಆರೋಗ್ಯವನ್ನು ಕಾಪಾ
ವುದು ಇದೇ. ಆದರೆ ವಾತವು ಉಳಿದೆರಡಕ್ಕಿಂತ ಹೆಚ್ಚಾದ
'ವಿಷಮಾಗ್ನಿ', ಪಿತ್ತವು ಹೆಚ್ಚಾದರೆ 'ತೀಕ್ಷ್ಣಾಗ್ನಿ', ಕಫ
ಹೆಚ್ಚಾದರೆ 'ಮಂದಾಗ್ನಿ' ಎಂದು ಹೇಳುತ್ತಾರೆ. ಇವೆಲ್ಲ ರೋ
ಸೂಚನೆಗಳೇ.

ಈ ಮೂರು ದೋಷಗಳು ಶರೀರದಲ್ಲಿ ಒಂದೇ ನ
ಯಲ್ಲಿರುವುದಿಲ್ಲ; ಅವುಗಳಲ್ಲಿ ಏರುಪೇರು ತಪ್ಪುವುದಿಲ್ಲ
ಒಮ್ಮೊಮ್ಮೆ ಒಂದೊಂದು ದೋಷ ಮೇಲುಗೈಯಾಗುತ್ತ
ಆದರೆ ಕೆಲವರ ಪ್ರಕೃತಿಯಲ್ಲಿ ಒಂದು ದೋಷಕ್ಕೆ ಅವಕಾ
ಹೆಚ್ಚು ಇರುವುದುಂಟು. ಅವರನ್ನು ಆ ಪ್ರಕೃತಿಯವ
ಎಂದು ಹೇಳಬಹುದು. ವಾತ ಪ್ರಕೃತಿಯವರಿಗೆ ಆರೋ
ಕೆಡುವುದು ಸುಲಭವೆಂದೂ, ಆದುದರಿಂದ 'ಹೀನ'ರೆಂದೂ, ಪಿ
ಪ್ರಕೃತಿಯವರು 'ಮಧ್ಯಮ'ರೆಂದೂ, ಕಫ ಪ್ರಕೃತಿಯವ
'ಉತ್ತಮ'ರೆಂದೂ ಹೇಳುವುದು ವಾಡಿಕೆ; ದೋಷಗ
ಮೂರೂ ಸಮನಾಗಿದ್ದರೇನೋ ಅಂಥವರು ಉತ್ತಮೋ
ಮರೇ. ಇಂಥವರು ತೀರ ಅಪುರೂಪವೆನ್ನಿ. ಸಾಮಾನ್ಯವಾ
ಸಣ್ಣವಯಸ್ಸಿರುವಾಗ ಕಫ ಹೆಚ್ಚಾಗುವುದೆಂದೂ, ಮ
ವಯಸ್ಸಿನಲ್ಲಿ ಪಿತ್ತ ಹೆಚ್ಚುವುದೆಂದೂ, ಮುಪ್ಪಿನಲ್ಲಿ ವಾ
ಬಲವಾಗುವುದೆಂದೂ ಹೇಳುತ್ತಾರೆ.

ಹೊರಗಣ ಒತ್ತಡದಿಂದ ಶರೀರದಲ್ಲಿ ಒಂದೊಂ
ದೋಷ ಹೆಚ್ಚುವುದು. ಹಗಲಾಗಲೀ ರಾತ್ರಿಯಾಗಲೀ ಮೊದ
ನಾಲ್ಕುಗಂಟೆಗಳು (ಮುಂಜಾನೆ ಮತ್ತು ರಾತ್ರಿಯ ಮೊದ

ಭಾಗ) ಕಫ ಹೆಚ್ಚುವ ಕಾಲ; ಹತ್ತರಿಂದ ಎರಡರವರೆಗೆ (ಮಧ್ಯಾಹ್ನ ಮತ್ತು ನಡುರಾತ್ರಿ) ಪಿತ್ತದ ಕಾಲ; ಎರಡರಿಂದ ಆರರವರೆಗೆ (ಹಗಲು, ರಾತ್ರಿಗಳ ಕೊನೆಯ ಭಾಗ) ವಾತದ ಕಾಲ. ಗ್ರೀಷ್ಮರ್ತುವಿನಲ್ಲಿ ಚಳಿ, ಗಾಳಿಯಿರುವಾಗ ಶರೀರದಲ್ಲಿ ವಾತ ಹೆಚ್ಚುತ್ತದೆ. ಶರದೃತುವಿನಲ್ಲಿಯೂ ಮಳೆ ಬೀಳುತ್ತಿರುವಾಗಲೂ ಪಿತ್ತ ಹೆಚ್ಚುತ್ತದೆ; ಹೇಮಂತ–ವಸಂತ ಋತುಗಳಲ್ಲಿ ಕಫ ಹೆಚ್ಚುತ್ತದೆ. ಆಹಾರದಲ್ಲಿ ಸಿಹಿ, ಒಗರು, ಬಿರುಸು ಇದ್ದರೆ ವಾತಕ್ಕೆ ಅನುಕೂಲ; ಹುಳಿ, ಕಾರ, ಉಪ್ಪು, ಸಾಸಿವೆ, ಇಂಗು ಮೊದಲಾದುವು ಪಿತ್ತಕ್ಕೆ ಅನುಕೂಲ; ಸಿಹಿ, ಹುಳಿ, ಕಾರ, ಜಡ, ಅಕ್ಕಿ, ಸಕ್ಕರೆ, ಮೊಸರು ಮೊದಲಾದುವು ಕಫವನ್ನು ಹೆಚ್ಚಿಸುತ್ತವೆ. ತರಕಾರಿಗಳನ್ನೂ ದೋಷಗಳ ಮೇಲೆ ವಿಂಗಡಿಸ ಬಹುದು.

ಕೆಲವರಿಗೆ ಕೆಲವು ರೋಗಗಳೇ ನಿಗದಿಯೆಂಬಂತೆ ಬರುತ್ತವೆಯಲ್ಲವೆ? ಆಯಾ ಪ್ರಕೃತಿಯವರಿಗೆ ಆಯಾ ದೋಷಗಳ ಏರುಪೇರಿಂದ ಕೆಲವೊಂದು ರೋಗಗಳು ಕಾಣಿಸಿಕೊಳ್ಳುವುದು ಸಹಜವಾಗುತ್ತದೆ. ಒಂದೊಂದು ಋತುವಿನಲ್ಲಿ ಒಂದೊಂದು ದೋಷದ ವ್ಯಾಧಿಗಳು ಹೆಚ್ಚುತ್ತವೆ. ಬದುಕಿನ ಆಯಾ ಕಾಲಗಳಲ್ಲಿ ಕೆಲವೇ ರೋಗಗಳು ಬಂದಡರುತ್ತವೆ. ಹೀಗಾಗುವುದರಿಂದ ತ್ರಿದೋಷವೆನ್ನುವುದು ಬರಿಯ ಸಿದ್ಧಾಂತವಾಗಿರದೆ ವೈದ್ಯದ ಮುಖ್ಯ ವಿಚಾರವಾಗಿದೆ. ರೋಗದ ಕಾರಣವನ್ನು ಕಂಡುಹಿಡಿಯುವುದಕ್ಕೆ, ಲಕ್ಷಣಗಳನ್ನು ಗುರುತಿಸುವುದಕ್ಕೆ, ಮದ್ದನ್ನು ಆರಿಸಿಕೊಳ್ಳುವುದಕ್ಕೆ, ಉಳಿದಂತೆ ರೋಗೋಪಚಾರ ಮಾಡುವುದಕ್ಕೆ ತ್ರಿದೋಷದ ತಿಳುವಳಿಕೆ ಅಗತ್ಯವಾಗಿದೆ.

ನಾಡಿಯನ್ನು ನೋಡುವಾಗಲೂ ತ್ರಿದೋಷಗಳ ಸ್ಥಿತಿಗತಿಗಳನ್ನೆ
ಅರಿತುಕೊಳ್ಳುವುದು.

ಇಷ್ಟೆಲ್ಲ ಹೇಳಿದ ಮೇಲೆ ದೋಷಗಳು ದ್ರವ್ಯಗಳೊ
ಶಕ್ತಿಗಳೋ ಎಂಬ ಸಂಶಯ ಬರುವುದು ಸಹಜ. ದ್ರವ್ಯವೆಂದ
ಆಕಾರವಿರಬೇಕು, ಶಕ್ತಿಯೆಂದರೆ ಕೆಲಸಕ್ಕೆ ಕಾರಣವಾಗಬೇಕು
ಶಕ್ತಿಯನ್ನು ಬಿಟ್ಟು ದ್ರವ್ಯವಿರುವುದು ಸಾಧ್ಯವಿಲ್ಲ. ಹಾಗೆಯೆ
ದ್ರವ್ಯವಿದ್ದರೆ ಶಕ್ತಿಯು ಸಾಧ್ಯವಾಗುವುದು. ಶಕ್ತಿಯ ಪಾಲ
ತುಂಬ ಕಡಮೆಯಿದ್ದರೆ ಅದನ್ನು ದ್ರವ್ಯವೆನ್ನುತ್ತೇವೆ, ದ್ರವ್ಯ
ಪಾಲು ತುಂಬ ಸೂಕ್ಷ್ಮವಾಗಿದ್ದರೆ ಅದು ಶಕ್ತಿಯೆನಿ
ಕೊಳ್ಳುತ್ತದೆ. ಈ ದೃಷ್ಟಿಯಿಂದ ಮೂರೂ ದೋಷಗಳ
ದ್ರವ್ಯಗಳೂ ಹೌದು, ಶಕ್ತಿಗಳೂ ಹೌದು ; ಆದರೆ ಶಕ್ತಿಯೆನ
ವುದು ಹೆಚ್ಚಾಗಿ ಒಪ್ಪುತ್ತದೆ. ಆರೋಗ್ಯಕ್ಕೂ ಇದೇ ಶಕ್ತಿಗಳ
ಕಾರಣ ; ರೋಗಕ್ಕೂ ಇವೇ ಕಾರಣವಾಗುತ್ತವೆ.

ಅಂತೂ ತ್ರಿದೋಷದ ಕಲ್ಪನೆ ಆಯುರ್ವೇದಕ್ಕೆ ಮೂ
ಭೂತವಾದುದು. ಯುನಾನೀ ವೈದ್ಯದಲ್ಲಿಯೂ ಇದ
ಪ್ರಭಾವವನ್ನು ಗುರುತಿಸಬಹುದು. 'ಹವಾ' (ವಾತ
'ಖೂನ್' (ರಕ್ತ–ಪಿತ್ತ), ಮತ್ತು 'ಬಲ್‌ಗಂ' (ಕಫ)
ಮೂರನ್ನು ಆ ವೈದ್ಯ ಮೂಲ ದ್ರವ್ಯಗಳೆಂದು ಎಣಿಸುತ್ತ
ಈ ಮೂರರಲ್ಲಿ 'ಖೂನ್' ಎಂದರೆ ಸಾಮಾನ್ಯವಾದ ಅರ್ಥ
ರಕ್ತವೆಂದು. ಈ ವೈದ್ಯಕ್ಕೆ ಆಕರವಾಗಿದ್ದ ಗ್ರೀಕ್ ವೈ
ದಲ್ಲಿಯೂ ದೋಷದಂಥ ಕಲ್ಪನೆಯೇ ಇದ್ದು, ರಕ್ತಕ್ಕೆ ಹೆಚ್ಚಿ
ಪಾತ್ರವನ್ನು ಕಾಣಿಸಿದ್ದರು. ಆಯುರ್ವೇದದಲ್ಲಿ ಮುಖ್ಯವಾ
ವಾತ ಗ್ರೀಕ್ ವೈದ್ಯದಲ್ಲಿರಲಿಲ್ಲ. ಸುಶ್ರುತನು ರಕ್ತವನ್ನು

ದೋಷಗಳಲ್ಲಿ ಎಣಿಸಿರುವುದನ್ನು ಗಮನಿಸಬೇಕು. ಮೂರು ದೋಷಗಳಿಗೆ ಸಹಕಾರಿಯಾಗಿ ರಕ್ತ ಕೆಲಸ ಮಾಡುವುದೆಂಬ ಕಲ್ಪನೆ ನಮ್ಮಲ್ಲಿಯೂ ಇದೆ.

# ೫. ಆಯುರ್ವೇದದ ವಿಭಾಗಗಳು

‘ಆಯುರ್ವೇದ’ದ ಹಿಂದೆ ‘ಅಷ್ಟಾಂಗ’ವೆಂಬ ವಿಶೇಷಣ
ವನ್ನು ಸೇರಿಸುವುದು ವಾಡಿಕೆ. ಈ ಹೆಸರು ಬಹಳ ಹಳೆಯದು
ಮಹಾಭಾರತದಲ್ಲಿಯೇ ಇದರ ಬಳಕೆಯಿದೆ. ಚರಕ, ಸುಶ್ರುತ
ವಾಗ್ಭಟ ಎಲ್ಲರೂ ಅಷ್ಟಾಂಗ ಆಯುರ್ವೇದವೆಂದೇ ಒಪ್ಪಿ
ಕೊಂಡಿದ್ದಾರೆ. ಈ ಮಾತಿಗೆ ‘ಎಂಟು ವಿಭಾಗಗಳಲ್ಲಿರು
ವೈದ್ಯ’ ಎಂದರ್ಥ. ನಮ್ಮ ನಾಡಿನಲ್ಲಿ ವೈದ್ಯದ ಬೆಳವಣಿ
ಎಂಟು ದಾರಿಗಳಲ್ಲಿ ಕವಲೊಡೆಯಿತು. ಒಂದೊಂದ
ಕವಲಿನಲ್ಲೂ ಸ್ವಾರಸ್ಯವಾದ ಪ್ರಯೋಗಗಳಿವೆ. ಮೂಲಭೂ
ವಾದ ಗ್ರಂಥಗಳಿವೆ.

ಚರಕನು ಹೇಳಿರುವ ಮೊದಲನೆಯ ವಿಭಾಗ ‘ಕಾಯ
ಚಿಕಿತ್ಸೆ’. ಸಾಮಾನ್ಯವಾಗಿ ಜನರಿಗೆ ಬರುವ ಕೆಮ್ಮು, ದಮ್ಮು
ನೆಗಡಿ, ಜ್ವರ, ವಾಂತಿ, ಭೇದಿ ಇಂಥ ರೋಗಗಳೂ, ಕೆಲವೊಮ
ತೋರಿಕೊಳ್ಳುವ ಕ್ಷಯ, ಅಪಸ್ಮಾರ, ಪ್ರಮೇಹ, ಉನ್ಮಾದ
ಕುಷ್ಠ ಇಂಥ ರೋಗಗಳೂ ಈ ವಿಭಾಗದ ವೈದ್ಯದಲ್ಲಿ ಸೇರ
ತ್ತವೆ. ಈ ರೋಗಗಳು ಒದಗುವ ಬಗೆ (ನಿದಾನ), ತೋ
ಕೊಳ್ಳುವ ರೀತಿ (ಲಕ್ಷಣ), ಅವುಗಳನ್ನು ಗುಣಪಡಿಸಲ
ಬಳಸುವ ಮದ್ದು (ಔಷಧ), ಮತ್ತೆ ನಡೆಸಬೇಕಾದ ಉಪಚಾರ
ಇರಬೇಕಾದ ಕಟ್ಟುಪಾಡು (ಪಥ್ಯ) ಇವೆಲ್ಲವನ್ನೂ ಕುರಿತದ್ದು
ಇದು. ಇಡೀ ದೇಹವನ್ನು ಒಂದೆಂದು ಬಗೆದು, ಅಂಗಾಂಗಗ

ತಿಂಗಡಣೆಯನ್ನು ಮೀರಿ, ರೋಗವನ್ನು ಹೋಗಲಾಡಿಸುವ ಪದ್ಧತಿ ಇಲ್ಲಿ ಮುಖ್ಯವಾದುದು. ನಮ್ಮವರೆಗೆ ಉಳಿದು ಬಂದಿರುವ ಆಯುರ್ವೇದದಲ್ಲಿ ಇದೇ ಮುಖ್ಯವಾದ ವಿಭಾಗ. ಆತ್ರೇಯ ಪರಂಪರೆಯಲ್ಲಿ ಬಂದ ಚರಕನ ಸಂಹಿತೆ ಈ ವಿಭಾಗವನ್ನೇ ಹೆಚ್ಚಾಗಿ ಹಿಡಿದಿದೆ.

ಎರಡನೆಯದು 'ಶಲ್ಯತಂತ್ರ'. ಹೊರಗಣ ಗಟ್ಟಿಪದಾರ್ಥ (ಬಾಣದ ಅಲಗು, ಕಲ್ಲುತುಂಡು, ಕಬ್ಬಿಣದ ಮೊಳೆ, ಮರದ ಚೂರು, ಮುಳ್ಳು ಇಂಥವು) ಯಾವುದೋ ಕಾರಣದಿಂದ ಮೈಯೊಳಗೆ ಹೊಕ್ಕು ತೊಂದರೆ ಕೊಡಲಾರಂಭಿಸಿದರೆ ಅದು 'ಶಲ್ಯ'ವೆನಿಸಿಕೊಳ್ಳುತ್ತದೆ. ಅದನ್ನು ಹೊರತೆಗೆಯದಿದ್ದರೆ ಶರೀರಕ್ಕೆ ಬಾಧೆ ತಪ್ಪುವುದಿಲ್ಲ, ಕಡೆಗೆ ಸಾವು ತಪ್ಪಿದ್ದಲ್ಲ. ಶರೀರದ ಮಾಂಸ ಮೊದಲಾದ ಮೆತ್ತನೆಯ ಭಾಗಗಳಲ್ಲಿ ಸೇರಿಕೊಂಡ ಇಂಥ ಶಲ್ಯಗಳನ್ನು ಹೊರತೆಗೆಯಲು ಬಗೆಬಗೆಯ ಶಸ್ತ್ರಗಳನ್ನು ಬಳಸಬೇಕಾಗುತ್ತದೆ, ಗಾಯವಾದೆಡೆ ಪಟ್ಟಿಯನ್ನು ಕಟ್ಟಬೇಕಾಗುತ್ತದೆ, ಶರೀರಕ್ಕೆ ಘಾಸಿಯಾಗದಂತೆ ಔಷಧವನ್ನೂ ಕೊಡಬೇಕಾಗುತ್ತದೆ. ಇವೆಲ್ಲ'ಶಲ್ಯತಂತ್ರ'ದಲ್ಲಿ ಬರುವ ವಿಚಾರಗಳು.

ಧಾನ್ವಂತರ ಸಂಪ್ರದಾಯಕ್ಕೆ ಸೇರಿದ ಸುಶ್ರುತನ ಸಂಹಿತೆ ಮುಖ್ಯವಾಗಿ ಇದನ್ನೇ ಕುರಿತದ್ದು. ಅವನು ಸಾವಿರವನ್ನೂ ಮೀರಿ ರೋಗಗಳನ್ನು ಹೆಸರಿಸಿದ್ದಾನೆ; ನಾಡೀಯಂತ್ರ, ಸ್ವಸ್ತಿಕಯಂತ್ರ, ಗರ್ಭಾಶಯಯಂತ್ರ ಮೊದಲಾಗಿ ನೂರಾರು ಶಸ್ತ್ರಗಳನ್ನು ವಿವರಿಸಿದ್ದಾನೆ; ವ್ರಣಗಳ ಸ್ಥಳ, ಸ್ವರೂಪ, ಸ್ವಭಾವಗಳನ್ನು ಅನುಸರಿಸಿ ಬಗೆಬಗೆಯ ಪಟ್ಟಿಗಳನ್ನು

ಸೂಚಿಸಿದ್ದಾನೆ. ಚಿಕಿತ್ಸೆಗಾಗಿ ದೇಹದಿಂದ ರಕ್ತವ
ಸ್ವಲ್ಪಮಟ್ಟಿಗೆ ಹೊರತೆಗೆಯುವ ಸಲುವಾಗಿ ಹನ್ನೆರ
ಜಾತಿಯ ಜಿಗಣೆಗಳನ್ನು ಹೇಳಿದ್ದಾನೆ. ಇವಲ್ಲದೆ ಅಗ್ನಿಕರ
ಕ್ಷಾರಕರ್ಮ,ಮೊದಲಾದ ಚಿಕಿತ್ಸಾಪದ್ಧತಿಗಳೂ ಇಲ್ಲಿ ಬರುತ್ತ
ಪ್ರಸೂತಿ ತಂತ್ರವೂ ಈ ವಿಭಾಗದಲ್ಲಿಯೇ ಸೇರುತ್ತದೆ.

ಮೂರನೆಯದು 'ಶಾಲಾಕ್ಯತಂತ್ರ'ವೆನಿಸಿಕೊಳ್ಳುತ್ತ
ಇದಕ್ಕೆ 'ಊರ್ಧ್ವಾಂಗ ಚಿಕಿತ್ಸೆ'ಯೆಂದೂ ಹೆಸರಿ
'ಊರ್ಧ್ವಾಂಗ'ವೆಂದರೆ ಮೇಲಿನ ಅಂಗಗಳು; ಮುಖ್ಯವಾಗಿ ತ
ಕಣ್ಣು, ಕಿವಿ, ಮೂಗು, ಗಂಟಲು ಈ ಅವಯವಗಳಲ್ಲಿ ತೊ
ಕೊಳ್ಳುವ ರೋಗಗಳಿಗೆಲ್ಲ ಇಲ್ಲಿ ಚಿಕಿತ್ಸೆಯನ್ನು ಹೇಳಿದ್ದಾ
'ಶಲಾಕೆ'ಯೆಂದರೆ ಸೂಜಿಯಂಥ ಮೊನೆಯುಳ್ಳ ಶಸ್ತ್ರ; ಇ
ಬಳಕೆ ಈ ವಿಭಾಗದಲ್ಲಿ ಹೆಚ್ಚಾಗಿರುವುದರಿಂದ ಇದು 'ಶಾಲಾ
ತಂತ್ರ'ವೆನಿಸಿಕೊಂಡಿತು. ವಿದೇಹದ ದೊರೆಯಾಗಿದ್ದ ಜನಕ
ಈ ತಂತ್ರದ ಸ್ವರೂಪವನ್ನು ನಿರ್ಧರಿಸಿದನಂತೆ. ಗಾಗ್
ಗಾಲವ, ನಿಮಿ ಮೊದಲಾದ ಹಿರಿಯರು ಈ ವಿಭಾಗ
ಗ್ರಂಥಗಳನ್ನು ರಚಿಸಿದ್ದರು. ಇಂದು ಈ ವಿಭಾಗ ಬೇರೆಯ
ಬಳಕೆಯಲ್ಲಿಲ್ಲ. ಅದರ ಒಂದು ಭಾಗ ಶಲ್ಯತಂತ್ರದ
ಇನ್ನೊಂದು ಭಾಗ ಕಾಯ-ಚಿಕಿತ್ಸೆಯಲ್ಲೂ ಸೇರಿಹೋಗಿವೆ.

ನಾಲ್ಕನೆಯದು 'ಕೌಮಾರಭೃತ್ಯ', ಎಂದರೆ ಮಕ
ರೋಗರುಜಿನಗಳನ್ನೇ ಕುರಿತದ್ದು. ಬೆಳವಣಿಗೆಯ ದಾರಿ
ಮಕ್ಕಳಿಗೆ ಕೆಲವೊಂದು ವಿಶೇಷ ವ್ಯಾಧಿಗಳು ಬರುತ್ತ
ಬೆಳವಣಿಗೆಯ ದಾರಿಯನ್ನೂ ತೊಡರಿಲ್ಲದಂತೆ ಮಾಡಬೇಕ
ತ್ತದೆ. 'ಕೌಮಾರಭೃತ್ಯ'ವೆಂಬ ವಿಭಾಗದಲ್ಲಿ ಮಕ್ಕಳ ರೋ

ಗಳು ಮಾತ್ರವಲ್ಲದೆ ಮಕ್ಕಳ ಬೆಳವಣಿಗೆ, ಅವರ ಪೋಷಣೆ, ಆಹಾರ ಮೊದಲಾದ ವಿವರಗಳೂ ಬರುತ್ತವೆ. ಒಂದು ಕಾಲ ದಲ್ಲಿ ಇದು ವಿಶೇಷವಾಗಿ ಬೆಳೆದ ವೈದ್ಯಪದ್ಧತಿಯಾಗಿದ್ದಿತು. ಗೌತಮ ಬುದ್ಧನ ವೈದ್ಯನಾಗಿದ್ದ ಜೀವಕನೆಂಬುವನು ಮಕ್ಕಳ ವೈದ್ಯಕದಲ್ಲಿ ಹೆಸರಾಗಿದ್ದವನು. ಅವನ ಹೆಸರಿನಲ್ಲಿಯೇ 'ಜೀವಕತಂತ್ರ'ವೆಂದು ಈ ವಿಭಾಗ ಜನರಿಗೆ ಪರಿಚಿತವಾಗಿದ್ದಿತು. 'ಕಾಶ್ಯಪೀಯ ಸಂಹಿತ' ವೆಸ್ನುವುದು ಈ ವಿಭಾಗದಲ್ಲಿ ಆಕರ ಗ್ರಂಥ.

ಐದನೆಯದು 'ಭೂತವಿದ್ಯೆ'. ಹೆಸರಿನಿಂದ ಗಾಬರಿಪಡ ಬೇಕಾದ ಕಾರಣವಿಲ್ಲ. ಈ ವಿಭಾಗ ಪ್ರಧಾನವಾಗಿ ಮನೋ ರೋಗಗಳನ್ನು ಕುರಿತದ್ದು. ಹಿಂದಿನ ಕಾಲದಲ್ಲಿ ಉನ್ಮಾದ, ಅಪಸ್ಮಾರ ಮೊದಲಾದ ರೋಗಗಳು ಭೂತ, ಪಿಶಾಚ, ಗ್ರಹ ಮೊದಲಾದ ದುಷ್ಟಶಕ್ತಿಗಳಿಂದ ಆದುವೆಂಬ ಕಲ್ಪನೆಯಿದ್ದಿತಷ್ಟೆ. ನಮ್ಮ ದೇಶದಲ್ಲಿ ಮಾತ್ರವಲ್ಲದೆ, ಪಾಶ್ಚಾತ್ಯದೇಶಗಳಪ್ಟು ಒಂದು ನೂರು ವರ್ಷಗಳ ಹಿಂದೆ ಕೂಡ ಇದೇ ಭಾವನೆ ಯಿದ್ದಿತು, ಆದರೆ ನಮ್ಮಲ್ಲಿ ಇದನ್ನು ತುಂಬ ಹಿಂದೆಯೇ ಚಿಕಿತ್ಸೆಯ ಒಂದು ವಿಭಾಗವೆಂದು ಕಂಡುಕೊಂಡಿದ್ದರು. ಮೇಲಾಗಿ, ಆಯುರ್ವೇದದಲ್ಲಿ ಹುಚ್ಚು ಮೊದಲಾದ ವ್ಯಾಧಿ ಗಳನ್ನು 'ಉನ್ಮಾದ ಚಿಕಿತ್ಸೆ'ಯೆಂದು ಕರೆದು, ಗ್ರಹಬಾಧೆ- ಆವೇಶ ಮೊದಲಾದ 'ಭೂತ ವಿಜ್ಞಾನೀಯ' ಮತ್ತು 'ಭೂತ ಪ್ರತಿಷೇಧ'ವೆಂಬ ವಿಭಾಗದಿಂದ ಬೇರ್ಪಡಿಸಿದ್ದಾರೆ. ಇದಕ್ಕಾಗಿ ಮಣಿ, ಮಂತ್ರ, ಔಷಧಗಳನ್ನೂ ಹೇಳಿದ್ದಾರೆ. ಮಾನಸಿಕ ವ್ಯಾಧಿಗಳನ್ನು ವ್ಯಾಧಿಗಳೆಂದೇ ಪರಿಗಣಿಸಿ ಅವಕ್ಕೆ ಇತರ

ವ್ಯಾಧಿಗಳಂತೆಯೇ ಚಿಕಿತ್ಸೆಗಳನ್ನು ಹೇಳಿರುವುದನ್ನು ಗಮನಿಸ
ಬೇಕು. ಇದಕ್ಕೆ ಅಥರ್ವವೇದದ ಭಾಗಗಳು ಆಕಾರವೆಂದು
ಎಣಿಕೆ.

ಆರನೆಯ 'ಅಗದ ತಂತ್ರ'ವು ವಿಷವೈದ್ಯವೆಂದು ಹೆಸ
ರಾಗಿದೆ. ಗದವೆಂದರೆ ವಿಷ; ಅಗದ ವಿಷಹಾರಿ. ನಮ್ಮ
ದೇಶದಲ್ಲಿ ಹಾವು, ಚೇಳು, ಮೊದಲಾದ ವಿಷಜಂತುಗಳ ಬಾಧೆ
ಮೊದಲಿನಿಂದ ಇದ್ದದ್ದೇ. ಇವು ಮಾತ್ರವಲ್ಲದೆ ನಾಯಿ, ನರಿ,
ತೋಳ, ಇಲಿ, ಮುಂಗಸಿ ಮೊದಲಾದ ಪ್ರಾಣಿಗಳು ಕಚ್ಚಿ
ದಾಗಲೂ ಮನುಷ್ಯನ ದೇಹದಲ್ಲಿ ವಿಷವಾಗಿ ತೋರಿದರೆ
ಕೊಡುವುದೂ ಅಪರೂಪವಾಗಿರಲಿಲ್ಲ. ಇಷ್ಟು ಸಾಲದೆಂಬಂತೆ,
ಕೆಲವು ಸಸ್ಯಗಳು ಆಹಾರದಲ್ಲಿ ಸೇರಿ ವಿಷವಾಗುತ್ತಿದ್ದುದೂ
ಉಂಟು. ಆಗದವರು ಊಟದಲ್ಲಿ ಅರಗದ ಮದ್ದನ್ನು ಬೆರೆಸಿ
ಕೊಡುವ ಪದ್ಧತಿಯೂ ಇದ್ದಿತು. ಹೀಗೆ ಶರೀರದಲ್ಲಿ ನಂಜಾಗಿ
ಸಾವನ್ನೇ ಒಡ್ಡುವಂಥ ವಿಷದ್ರವ್ಯಗಳನ್ನು ಶರೀರದಲ್ಲೇ
ತೋರದಂತೆ ಇಂಗಿಸಿಬಿಡುವ, ಅಥವಾ ಶರೀರದಿಂದ
ಹೊರಗೆ ಹಾಕುವ ವೈದ್ಯ ನಮ್ಮ ದೇಶದಲ್ಲಿ ವಿಶೇಷವಾಗಿ
ಬೆಳೆದದ್ದು ಸಹಜವೇ. ಅಲೆಗ್ಸಾಂಡರನು ನಮ್ಮ ದೇಶಕ್ಕೆ
ಬಂದಾಗ ಇಲ್ಲಿನ ವಿಷವೈದ್ಯದ ಹಿರಿಮೆಯನ್ನು ಮೆಚ್ಚಿಕೊಂಡಿ
ದ್ದನು ; ವಿಷವೈದ್ಯರಿಗೆ ಹೆಚ್ಚಿನ ಮರ್ಯಾದೆಯನ್ನೂ ಅವನು
ಮಾಡಿದ ಉಲ್ಲೇಖವಿದೆ.

ಚರಕನ ಸಂಹಿತೆಯಲ್ಲಿ ಚಿಕಿತ್ಸಾಸ್ಥಾನದ ಒಂದು ಅಧ್ಯಾಯ
ವನ್ನೇ ಈ ವಿಭಾಗಕ್ಕೆ ಮೀಸಲಾಗಿ ಇಡಲಾಗಿದೆ. ಸುಶ್ರುತನ
ಸಂಹಿತೆಯಲ್ಲಂತೂ ಒಂದು 'ಸ್ಥಾನ'ವೇ ಇದನ್ನು ಕುರಿತದ್ದು;

ಇದಕ್ಕೆ 'ಕಲ್ಪಸ್ಥಾನ' ವೆಂದು ಹೆಸರು. ಇವಲ್ಲದೆ ಕಾಶ್ಯಪಸಂಹಿತೆ, ಲಾಟ್ಯಾಯನ ಸಂಹಿತೆ, ಆಲಂಬಾಯನ ಸಂಹಿತೆ ಮೊದಲಾದವು ವಿಷವೈದ್ಯವನ್ನು ಹೆಚ್ಚಾಗಿ ಪ್ರಸ್ತಾಪಿಸುತ್ತವೆ. ಕೇರಳದಲ್ಲಿ ವಿಷವೈದ್ಯ ಹೆಸರಾದದ್ದು.

ಎಳನೆಯ 'ರಸಾಯನ'. ರಸವೆಂದರೆ ಆರೋಗ್ಯವನ್ನು ಕೆಡದಂತೆ ಕಾಪಾಡುವ ಸಾಧನೆ. ಮುಪ್ಪು ಬರದಂತೆ, ರೋಗಗಳು ಕಾಡದಂತೆ, ಮೈಯಲ್ಲಿ ಉತ್ಸಾಹ ಅಡಗದಂತೆ ಔಷಧಗಳನ್ನು ಮಾಡುವುದು 'ರಸಾಯನ'ವೆನಿಸಿಕೊಳ್ಳುತ್ತದೆ. ಬೇಗ ಮಾಯ ವಾಗುವ ಯೌವನವನ್ನು ಉಳಿಸಿಕೊಳ್ಳುವುದು. ಸಹಜ ವಾಗಿಯೇ ಬರುವ ಮುಪ್ಪನ್ನು ತಡೆಗಟ್ಟುವುದು. ಬದುಕು ರೋಗರುಜಿನಗಳಿಲ್ಲದೆ ಬಹುಕಾಲ ಮುಂದರಿಯುವಂತೆ ಮಾಡುವುದು. ಇಂದ್ರಿಯಪಾಟವವೂ ಬುದ್ಧಿಶಕ್ತಿಯೂ ನೆನಪೂ ಹೆಚ್ಚುವಂತೆ ಮಾಡುವುದು ಇವೆಲ್ಲ ಈ ವಿಭಾಗದಲ್ಲಿ ಬರುವ ವಿಚಾರಗಳು. ಈ ಬಗೆಯ ಶಕ್ತಿಯನ್ನು ಪಡೆದುಕೊಳ್ಳಲು ಹಲವಾರು ವಿಶೇಷ ಔಷಧಗಳನ್ನು ಸಿದ್ಧರು ತಯಾರಿಸಿ ಜನರಲ್ಲಿ ಪ್ರಚಾರಮಾಡಿದ್ದಾರೆ; ಇವಕ್ಕೆ 'ಸಿದ್ಧೌಷಧ'ಗಳೆಂದೇ ಹೆಸರು.

ನಾಗಾರ್ಜುನನೆಂಬ ಸಿದ್ಧನು ಈ ವಿಭಾಗದಲ್ಲಿ ಪ್ರಸಿದ್ಧ ನಾದವನು. ಅವನೂ, ಅವನ ಪರಂಪರೆಯಲ್ಲಿ ಬಂದ ಹಲವರೂ ರಸವೈದ್ಯವನ್ನು ಕುರಿತು ಹಲವು ಆಕರಗ್ರಂಥಗಳನ್ನು ಬರೆದಿದ್ದಾರೆ. ಈ ವಿಭಾಗದ ವೈದ್ಯದಲ್ಲಿ ಪಾದರಸದ ಬಳಕೆ ಹೆಚ್ಚು; ಲೋಹಗಳ ಬಳಕೆಯೂ ಉಂಟು. ಬಂಗಾಳ, ಅಸ್ಸಾಮ್ ಪ್ರಾಂತ್ಯಗಳಲ್ಲಿ ರಸಾಯನತಂತ್ರ ಬಹುವಾಗಿ ಬೆಳೆಯಿತು.

ಕಡೆಯದಾದ 'ವಾಜೀಕರಣ' ವಿಭಾಗವನ್ನು 'ವೃಷ'ವೆಂದು
ಕರೆಯುತ್ತಾರೆ. ಯಾವುದಾದರೂ ರೋಗದಿಂದಲೋ ಸಹಜ
ವಾದ ಮುಪ್ಪಿನಿಂದಲೋ ಅತಿಯಾದ ಭೋಗದಿಂದಲೋ ಮನು
ಷ್ಯನ ಲೈಂಗಿಕ ಸಾಮರ್ಥ್ಯವು ಕಡಮೆಯಾದರೆ, ಅಥವಾ ಮ
ಯಾದರೆ ಅದನ್ನು ಮರುಕಳಿಸುವುದು ಈ ವೈದ್ಯವಿಭಾಗದ
ಮುಖ್ಯ ಉದ್ದೇಶ. ಭೋಗವನ್ನು ಬಯಸುವ, ಮಕ್ಕಳನ್ನು
ಬಯಸುವ ಶ್ರೀಮಂತರೂ, ರಾಜರೂ, ಅಧಿಕಾರಿಗಳೂ, ಈ
ವಿಭಾಗದ ವೈದ್ಯವನ್ನು ಬೆಳೆಯಿಸಿದರು. ಚರಕನ ಮತ್ತು
ಸುಶ್ರುತನ ಸಂಹಿತೆಗಳಲ್ಲಿ ಇದರ ಪ್ರಸ್ತಾಪ ಅಷ್ಟಾಗಿ ಬರುವುದಿಲ್ಲ
ನಂದಿಯೆಂಬುವನ 'ಕಾಮಸೂತ್ರ', ಕುಚುಮಾರ ತಂತ್ರ ಮೊದ
ಲಾದವು ಈ ವಾಜೀಕರಣದ ಧಾತುವರ್ಧಕ, ವೀರ್ಯೋತ್ತೇಜಕ
ಔಷಧಗಳನ್ನು ಹೆಚ್ಚಾಗಿ ಹೇಳುತ್ತವೆ.

ಹೀಗೆ ಆಯುರ್ವೇದದಲ್ಲಿ ಎಂಟು ವಿಭಾಗಗಳಿದ್ದರೂ
ಮುಖ್ಯವಾಗಿ ಬೆಳೆದುಬಂದವು ಎರಡೇ ಪರಂಪರೆಗಳು: ಕಾಯ-
ಚಿಕಿತ್ಸೆಯನ್ನು ಹೇಳುವ ಆತ್ರೇಯಪರಂಪರೆ, ಶಲ್ಯತಂತ್ರವನ್ನು
ಹೇಳುವ ಧಾನ್ವಂತರ ಪರಂಪರೆ. ಉಳಿದ ಅಂಗಗಳು ಆಗಾಗ
ಅಲ್ಲಲ್ಲಿ ಬಳಕೆಗೆ ಬಂದು ಹರಡಿಕೊಂಡುವು: ಕಾಲಕ್ರಮದಲ್ಲಿ ಮ
ಯಾದುವು. ಈಚೆಗೆ ಶಲ್ಯತಂತ್ರವೂ ಇದೇ ಅವಸ್ಥೆಯನ್ನು
ಪಡೆದಿದೆಯೆನ್ನಿ. ಆದುದರಿಂದ ಮುಂದೆ ಬೆಳೆದುಬಂದ ಆತ್ರೇಯ
ಪರಂಪರೆಯ ಆಯುರ್ವೇದವೇ ಇವೆಲ್ಲ ಭಾಗಗಳನ್ನೂ ಅಷ್ಟಿಷ್ಟು
ಅಳವಡಿಸಿಕೊಂಡಿತು. ಕೆಲವು ಪ್ರಯೋಗಗಳನ್ನೂ ಚಿಕಿತ್ಸೆ
ಗಳನ್ನೂ ಉಳಿಸಿಕೊಂಡಿತು.

# ೬. ಪಶುವೈದ್ಯ, ವೃಕ್ಷಾಯುರ್ವೇದ

ಆಯುರ್ವೇದ ಮನುಷ್ಯರ ಆರೋಗ್ಯವನ್ನು ಮಾತ್ರ ಹೇಳುತ್ತದೆ ಎಂದು ಬಗೆಯಬಾರದು. ಆಯುರ್ವೇದದ ಮೂಲಸೂತ್ರಗಳಾದ ಪಾಂಚಭೌತಿಕ ಸಿದ್ಧಾಂತ ಮತ್ತು ತ್ರಿದೋಷದ ಕಲ್ಪನೆ ಪಶುಪ್ರಾಣಿಗಳಿಗೂ ಗಿಡಮರಗಳಿಗೂ ಮನುಷ್ಯರಷ್ಟೇ ಅನ್ವಯಿಸುತ್ತವೆ. ಅದರಲ್ಲಿಯೂ ಮನುಷ್ಯರ ನೆರಳಿನಲ್ಲಿಯೇ ಬಾಳುವ, ಅವರಿಗೆ ಹಲವು ವಿಧಗಳಲ್ಲಿ ನೆರವಾಗುವ ಜಂಗಮ ಜೀವವೆನಿಸಿದ ಪ್ರಾಣಿವರ್ಗದ, ಸ್ಥಾವರ ಜೀವವೆನಿಸಿದ ಸಸ್ಯವರ್ಗದ ಆರೋಗ್ಯ ಮನುಷ್ಯರಿಗೆ ಮುಖ್ಯವಾದುದಲ್ಲವೆ? ಹೊರಗಣ ಜೀವಪರಿಸರ ನೆಮ್ಮದಿಯಿಂದಿದ್ದರೆ ಮನುಷ್ಯನ ಬದುಕೂ ನೆಮ್ಮದಿಯಿಂದಿರುತ್ತದೆ. ಈ ದೃಷ್ಟಿಯಿಂದ ವೇದಗಳ ಕಾಲದಿಂದಲೂ ಪಶುವೈದ್ಯ, ವೃಕ್ಷಾಯುರ್ವೇದಗಳು ಬೆಳೆದು ಬಂದಿವೆ.

ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಅಶೋಕನು ಪಶುಗಳಿಗೆಂದೇ ಬೇರೆ ಚಿಕಿತ್ಸಾಲಯಗಳನ್ನು ಏರ್ಪಡಿಸಿದ್ದುದು ಅವನ ಶಾಸನಗಳಿಂದ ತಿಳಿದುಬರುತ್ತದೆ. ಆ ತರುಣದಲ್ಲಿ ಇಲ್ಲಿಗೆ ಬಂದಿದ್ದ ಮೆಗಾಸ್ತನೀಸನು ಆನೆಗಳ ರೋಗಗಳನ್ನು ಇಲ್ಲಿನ ವೈದ್ಯರು ಗುಣಪಡಿಸುತ್ತಿದ್ದ ಬಗೆಯನ್ನು ಒಕ್ಕಣಿಸಿದ್ದಾನೆ. ಕ್ರಿಸ್ತಾಬ್ದ ನಾಲ್ಕನೆಯ ಶತಮಾನದಲ್ಲಿ ಶ್ರೀಲಂಕೆಯ ದೊರೆಯಾಗಿದ್ದ ಬುದ್ಧದತ್ತನು ತನ್ನ ಸೈನ್ಯದಲ್ಲಿದ್ದ ಆನೆಗಳ,

ಕುದುರೆಗಳ ರೋಗಗಳನ್ನು ಆಯುರ್ವೇದ ವೈದ್ಯರಿಂದ ಗುಣ
ಪಡಿಸಿಕೊಳ್ಳುತ್ತಿದ್ದ ಉಲ್ಲೇಖವಿದೆ. ಕ್ರಿಸ್ತಾಬ್ದ 1030ರ
ಸುಮಾರಿಗೆ ಇಲ್ಲಿಗೆ ಬಂದಿದ್ದ ಅಲ್‌ಬೆರೂನಿಯು ಆನೆಗಳ ವೈದ್ಯ
ವನ್ನು ಕುರಿತು ಗ್ರಂಥವೊಂದು ಬಳಕೆಯಲ್ಲಿದ್ದುದನ್ನು ತಿಳಿಸು
ತ್ತಾನೆ.

ಚರಕ ಸಂಹಿತೆಯ ಸಿದ್ಧಿಸ್ಥಾನವೆಂಬ ಪರಿಚ್ಛೇದದಲ್ಲಿಯೇ
ಪಶುವೈದ್ಯದ ಪ್ರಸ್ತಾಪವಿದೆ. ಹಾರೀತ ಸಂಹಿತೆಯು ಆತ್ರೇಯ
ಸಂಪ್ರದಾಯದಲ್ಲಿ ಮನುಷ್ಯರಿಗೆ ಮಾತ್ರವಲ್ಲದೆ ಆನೆ, ಕುದುರೆ,
ಜಿಂಕೆ, ಎಮ್ಮೆ, ಒಂಟೆ, ಹಾವು, ಇಲಿ, ಮರ, ಗಿಡಗಳಿಗೂ ಚಿಕಿತ್ಸೆ
ಯಿದೆಯೆಂದು ಹೇಳುತ್ತದೆ. ರಾಜರ ಸೈನ್ಯದಲ್ಲಿ ತಪ್ಪದೆ ಇರ
ಬೇಕಾದ ಕುದುರೆಗಳನ್ನೂ ಆನೆಗಳನ್ನೂ ರೋಗವಿಲ್ಲದೆ ಬಲವಾಗಿ
ಇರಿಸಬೇಕಾದ ಅಗತ್ಯವಿದ್ದಿತು. ಈ ಅಗತ್ಯವನ್ನು ವೇದಕಾಲ
ದಿಂದಲೂ ಮನಗಂಡಿದ್ದರು. ಅಶ್ವಾಯುರ್ವೇದ ಗಜಾಯು
ರ್ವೇದಗಳು ಹೀಗೆ ಬೆಳೆದುವು. ಜನರ ನಿತ್ಯದ ಬದುಕಿಗೆ ಬೇಕಾದ
ಹಾಲು, ತುಪ್ಪ, ಮೊಸರು ಮೊದಲಾದುವನ್ನು ಒದಗಿಸಲು
ಹಸುವೂ ರೋಗವಿಲ್ಲದೆ ಇರಬೇಕೆಂಬ ಅಗತ್ಯ ಗವಾಯು
ರ್ವೇದಕ್ಕೆ ಕಾರಣವಾಯಿತು.

ಮಹಾಭಾರತದಲ್ಲಿ ಮಾದ್ರಿಯ ಮಕ್ಕಳಾದ ನಕುಲ
ಸಹದೇವರಿಗೆ ದ್ರೋಣಾಚಾರ್ಯರೇ ಕುದುರೆಗಳ, ಹಸುಗಳ
ವೈದ್ಯವನ್ನು ಹೇಳಿಕೊಟ್ಟರೆಂಬ ಮಾತಿದೆ. ನಕುಲನು
ಅಶ್ವಾಯುರ್ವೇದಲ್ಲಿಯೂ (ಎಂದರೆ ಕುದುರೆಗಳ ವೈದ್ಯ
ದಲ್ಲಿಯೂ) ಸಹದೇವನು ಗವಾಯುರ್ವೇದಲ್ಲಿಯೂ (ಎಂದರೆ
ಹಸು ಕರುಗಳ ವೈದ್ಯದಲ್ಲಿಯೂ) ಹೆಸರಾದರು. ನಕುಲನು

'ಅಶ್ವಚಿಕಿತ್ಸೆ 'ಯೆಂಬ ಗ್ರಂಥವನ್ನೂ ಬರೆದಿದ್ದಾನೆ. ರಾಮಾಯಣ ಕಾಲದಲ್ಲಿ ದಶರಥನ ಓರಗೆಯವನಾಗಿದ್ದ ರೋಮಪಾದನಿಗೆ ಪಾಲಕಾಪ್ಯನೆಂಬ ಋಷಿಯು ಆನೆಯ ವೈದ್ಯವನ್ನು (ಎಂದರೆ ಗಜಾಯುರ್ವೇದವನ್ನು) ಕಲಿಸಿದನೆಂದು ಉಲ್ಲೇಖವಿದೆ. ಇವೆರಡೂ ವಿಭಾಗಗಳಲ್ಲಿ ಹಲವಾರು ಹಳೆಯ ಪುಸ್ತಕಗಳು ಉಳಿದುಬಂದಿವೆ.

ಇವುಗಳಲ್ಲಿ ಪ್ರಸಿದ್ಧವಾದುದು ಶಾಲಿಹೋತ್ರನ ಹೆಸರಿನಲ್ಲಿರುವ ಅಶ್ವಾಯುರ್ವೇದ. ಶಾಲಿಹೋತ್ರನು ಸುಶ್ರುತನ ಗುರುವೆಂಬ ಸೂಚನೆಯಿದೆ. ಈ ಗ್ರಂಥದಲ್ಲಿ ಕುದುರೆಗಳ ದೇಹ ರಚನೆ, ಅವುಗಳ ಜಾತಿಭೇದ, ಸ್ವಭಾವ, ಪೋಷಣೆ, ಅವುಗಳಿಗೆ ಬರುವ ರೋಗಗಳು, ಅವಕ್ಕೆ ಮಾಡಬೇಕಾದ ಚಿಕಿತ್ಸೆ ಮೊದಲಾದ ವಿವರಗಳನ್ನು ಎಂಟು 'ಸ್ಥಾನ'ಗಳಲ್ಲಿ ಹೇಳಲಾಗಿದೆ. ಇಡೀ ಗ್ರಂಥ ದೊರೆತಿಲ್ಲವಾದರೂ, ದೊರೆತಿರುವಷ್ಟು ಸ್ವಾರಸ್ಯವಾಗಿದೆ.

ಪರಾಶರ ಸಂಹಿತೆಯಲ್ಲಿ ಪಶುಗಳನ್ನು ಸಾಕುವ ಬಗೆ, ಅವುಗಳಿಗೆ ಒಳ್ಳೆಯ ಮೇವು, ಅವುಗಳನ್ನು ಕಾಡುವ ಕಾಯಿಲೆಗಳು, ಅವುಗಳ ಪರೀಕ್ಷೆ, ಅವಕ್ಕೆ ಚಿಕಿತ್ಸೆ ಈ ವಿಚಾರಗಳು ಬಂದಿವೆ. ಒಂದು ಕಾಲದಲ್ಲಿ 'ಗವಾಯುರ್ವೇದ' ತುಂಬ ಬಳಕೆಯಲ್ಲಿದ್ದಿತು; ಗೋವೈದ್ಯರು ಮೊನ್ನೆ ಮೊನ್ನೆಯವರೆಗೂ ಹಳ್ಳಿಗಳ ಕಡೆ ಇರುತ್ತಿದ್ದರು.

ರುದ್ರದೇವನೆಂಬುವನು 'ಶ್ಯೈನಿಕ ಶಾಸ್ತ್ರ'ವೆಂಬ ಗ್ರಂಥವೊಂದನ್ನು ಬರೆದಿದ್ದಾನೆ. ಇದರಲ್ಲಿ ಹದ್ದುಗಳ ವಿಚಾರವಾಗಿ

ಹಲವು ವಿವರಗಳು ದೊರೆಯುತ್ತವೆ. ಅವುಗಳಿಗೆ ಬರುವ
ರೋಗಗಳನ್ನೂ ಚರ್ಚಿಸಲಾಗಿದೆ. ಅವಕ್ಕೆ ಮದ್ದನ್ನೂ ಹೇಳಿದೆ.
ಹದ್ದುಗಳನ್ನು ಶ್ರೀಮಂತರೂ, ಅರಸರೂ ಸಾಕಿಕೊಂಡು,
ಅವುಗಳಿಂದ ಕೆಲವೊಂದು ಉಪಯೋಗಗಳನ್ನೂ ಪಡೆದುಕೊಳ್ಳ
ತ್ತಿದ್ದರು. ಆದುದರಿಂದ ಈ ಶಾಸ್ತ್ರ ಅಗತ್ಯವಾಯಿತು.

'ವೃಕ್ಷಾಯುರ್ವೇದ' ಬೆಳೆಯಲು ಅನೇಕ ಕಾರಣ
ಗಳಿದ್ದವು. ಮನೆಯ ಸುತ್ತ ಗಿಡಗಳನ್ನು ಬೆಳೆಯಿಸಿಕೊಳ್ಳುವ
ವಾಡಿಕೆ ನಮ್ಮ ದೇಶದಲ್ಲಿ ಬಹಳ ಹಳೆಯದು. ನೆರೆಯಲ್ಲಿ
ಒಳ್ಳೆಯ ಗಿಡಗಳಿದ್ದರೆ, ಮನೆಯಲ್ಲೇ ಒಬ್ಬ ವೈದ್ಯನಿದ್ದಂತೆ.
ಗಿಡಮೂಲಿಕೆಗಳೇ ಆಯುರ್ವೇದದ ಚಿಕಿತ್ಸೆಗೆ ಊರು
ಗೋಲಲ್ಲವೆ? ಮನೆಯ ತೋಟಗಳಲ್ಲದೆ ಊರಿನಲ್ಲಿ ಉದ್ಯಾನವೂ
ಇರಬೇಕೆನ್ನುವುದು ವಾಸ್ತುಶಾಸ್ತ್ರದ ವಿಧಿ. ಊರಿನಾಚೆ
'ಬನ'ವೂ ಇರುತ್ತಿದ್ದಿತು. ವೈದ್ಯರು ತಮ್ಮ ಔಷಧ ಸಂಗ್ರಹಣೆ
ವನ್ನು ಮಾಡುತ್ತಿದ್ದುದು ಇಲ್ಲಿಯೇ. ಪ್ರತಿಯೊಬ್ಬ ವೈದ್ಯನೂ
ಔಷಧವನ್ನು ತಾನೇ ತಯಾರಿಸಿಕೊಳ್ಳಬೇಕಾಗಿದ್ದಿತು; ಈಗಿನಂತೆ
ಔಷಧಗಳನ್ನು ಅಂಗಡಿಗಳಲ್ಲಿ ಮಾರುವ ವಾಡಿಕೆಯಿರಲಿಲ್ಲ.
ಆದ್ದರಿಂದ ವೈದ್ಯನಾದವನಿಗೆ ಮರಗಿಡಗಳ ವಿಚಾರ ಚೆನ್ನಾಗಿ
ತಿಳಿದಿರಬೇಕಾಗಿದ್ದಿತು.

ಪರಾಶರನ 'ವೃಕ್ಷಾಯುರ್ವೇದ' ಕ್ರಿಸ್ತಪೂರ್ವ
ಒಂದನೆಯ ಶತಮಾನದಲ್ಲಿ ಸಿದ್ಧವಾದ ಗ್ರಂಥ. ಗಿಡ ಬೆಳೆಯುವ
ಬಗೆಯೆಲ್ಲವನ್ನೂ ವಿವರಿಸಿ, ಗಿಡ-ಬಳ್ಳಿ-ಮರ-ಪೊದೆ ಮೊದಲಾದ
ಭೇದಗಳೆಲ್ಲವನ್ನೂ ಹೇಳಿ ಯಾವ ಯಾವ ಗಿಡಕ್ಕೆ ಯಾವ
ರೀತಿಯ ಗೊಬ್ಬರ, ಯಾವ ಗಿಡಕ್ಕೆ ಯಾವುದ

ಅನುಕೂಲವಾದ ಕಾಲ ಮೊದಲಾದ ವಿವರಗಳನ್ನು ಕೊಟ್ಟು, ಕಡೆಯಲ್ಲಿ ಗಿಡಗಳಿಗೆ ತಗಲುವ ರೋಗಗಳನ್ನೂ ಅವಕ್ಕೆ ಮಾಡಬೇಕಾದ ಮದ್ದನ್ನೂ 'ತರುಚಿಕಿತ್ಸಾ', 'ಭೇಷಜವಿದ್ಯಾ', 'ಗುಲ್ಮ ವೃಕ್ಷಾಯುರ್ವೇದ', 'ಉಪವನ ವಿನೋದ' ಮೊದಲಾದ ಹಲವು ಗ್ರಂಥಗಳು ತಿಳಿಸುತ್ತವೆ.

## ೭. ಆಯುರ್ವೇದದ ಔಷಧಿಗಳು

ಸುಶ್ರುತನ ಪ್ರಕಾರ ಮನುಷ್ಯನ ಮದ್ದಿಗೆ ಬರದಿರು
ಪದಾರ್ಥವೇ ಪ್ರಪಂಚದಲ್ಲಿಲ್ಲ. ಮತ್ತು ವೈದ್ಯನು ರೋಗವನ
ಹೋಗಲಾಡಿಸುವ ದ್ರವ್ಯವೆಲ್ಲವೂ ಔಷಧಿಯೇ. ಆದರೆ ಆಯ
ರ್ವೇದವು ಬಳಸುವ ಔಷಧಿಗಳಲ್ಲಿ ಮೂರು ಬಗೆಯವನ
ವಿಶೇಷವಾಗಿ ಒಕ್ಕಣಿಸುತ್ತಾರೆ—ಜಂಗಮ, ಪಾರ್ಥಿವ, ಔದ್ಭಿ
ಎಂದು. ಜಂಗಮವೆಂದರೆ ಓಡಿಯಾಡುವ ಪ್ರಾಣಿಗಳು, ಇ
ಗಳಿಂದ ಪಡೆದುಕೊಂಡ ದ್ರವ್ಯಗಳಲ್ಲಿ ಮನುಷ್ಯನ ರೋಗ
ಮದ್ದು ಮಾಡಬಲ್ಲವು ಕೆಲವು ಇರುತ್ತವೆ. ಹಸುವಿನಿಂದ ಪಡೆ
ಕೊಂಡ ಹಾಲು, ಜೇನುನೊಣಗಳಿಂದ ಜೇನುತುಪ್ಪ, ಇ
ವಲ್ಲದೆ ಪ್ರಾಣಿಗಳ ಮೂತ್ರ, ಪುರೀಷ, ಚರ್ಮ, ಎಲುಬ
ಕೊಂಬು, ಗೊರಸು, ಒಳಭಾಗಗಳು ಇವೆಲ್ಲವೂ ಈ ವರ್ಗದ
ಸೇರುತ್ತವೆ. ಪಾರ್ಥಿವ ಎಂದರೆ ಭೂಮಿಯಲ್ಲೇ ನೆಲೆಯಾಗಿರು
ಲೋಹಗಳು, ಖನಿಜಗಳು, ಲವಣಗಳು, ಮಣಿಗಳು ಮುಂ
ದುವು. ಔದ್ಭಿದವೆಂದರೆ ಭೂಮಿಯನ್ನು ಒಡೆದುಕೊಂ
ಮೇಲೆದ್ದು ಬೆಳೆಯುವ ಗಿಡಮರಗಳು, ಸಸ್ಯವರ್ಗ.

ಆಯುರ್ವೇದದಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಔಷ
ದ್ರವ್ಯಗಳು ಕಡೆಯ ವರ್ಗಕ್ಕೆ ಸೇರಿದುವೇ. ವೇದಕಾಲದಿಂದಲ
ಈ ಔಷಧಿಗಳೇ ವೈದ್ಯರಿಗೆ ಮುಖ್ಯವಾದ ಆಸರೆಯಾಗಿ ಉಳಿ
ಬಂದಿವೆ. ಔಷಧಿಯೆಂಬ ಮಾತಿಗೆ ಮೂಲವಾದ 'ಓಷಧಿ'ಎಂ

ಗಿಡ-ಮರಗಳಿಂದೇ ಅರ್ಥ. 'ಓಷ'ವೆಂದರೆ ರಸ, ಅದು ಇರುವುದು ಔಷಧಿ. ಚರಕನು ಹೇಳಿರುವ 574 ಮದ್ದಿನ ದ್ರವ್ಯಗಳಲ್ಲಿ 340 ರಷ್ಟು ಔಷಧಿಗಳು, 170 ಪ್ರಾಣಿಗಳಿಂದ ತಯಾರಾದವು (ಜಂಗಮ), ಮತ್ತು 64 ಖನಿಜವರ್ಗದವು (ಪಾರ್ಥಿವ). ಸುಶ್ರುತನ ಪಟ್ಟಿಯಲ್ಲಿ ಸುಮಾರು 400 ಔಷಧಿಗಳು, 57 ಜಂಗಮ ವರ್ಗಕ್ಕೆ ಸೇರಿದವು, 64 ಪಾರ್ಥಿವ ವರ್ಗದವು.

ಔಷಧಿವರ್ಗದಲ್ಲಿ ವರ್ಷಕ್ಕೊಮ್ಮೆ ಫಲಕೊಡುವ ಸಸ್ಯಗಳೇ ಓಷಧಿಗಳೆಂದೂ, ಹೂವಿಲ್ಲದೆ ಕಾಯಿಬಿಡುವುವು ವನಸ್ಪತಿಗಳೆಂದೂ, ಹೂವು ಬಿಡುವುವು ವಾನಸ್ಪತ್ಯಗಳೆಂದೂ, ಹಬ್ಬಿಕೊಳ್ಳಲು ಗಟ್ಟಿಯಾದ ಆಸರೆಯನ್ನು ಬಯಸುವ ಬಳ್ಳಿಗಳು ವೀರುಧಗಳೆಂದೂ ನಾಲ್ಕು ಬಗೆಯಾಗಿ ಹೇಳುವುದಿದೆ. ಇವಲ್ಲದೆ ಲತೆ, ಗುಲ್ಮ, ಗುಚ್ಛ,ವಲ್ಲಿ, ತ್ವಕ್ಸಾರ ಮೊದಲಾದ ಹಲವು ಇತರ ಜಾತಿಯ ಗಿಡಗಳೂ ಇವೆ. ಇವೆಲ್ಲದರ ಎಲ್ಲ ಭಾಗವೂ ಮದ್ದಿಗೆ ಬರುವುದು ಸ್ವಾರಸ್ಯ. ದಂಟು, ಬೇರು, ಸಾರು, ತೊಗಟೆ, ರಸ, ಎಲೆ, ತೈಲ, ಕಾಯಿ, ಚಿಗುರು, ಮುಳ್ಳು, ಹೂವು, ಹಾಲು, ಎಲ್ಲವೂ ಔಷಧಿಗಳಾಗಬಲ್ಲುವು.

ವೇದದಲ್ಲಿ ಸುಮಾರು ಒಂದು ನೂರು ಔಷಧಿಯ ಗಿಡಗಳನ್ನು ಹೇಳಿದರೆ, ಸುಶ್ರುತನ ಕಾಲಕ್ಕೆ 385 ಆದವು. ಅದೇ, ಧನ್ವಂತರಿ ನಿಘಂಟಿನಲ್ಲಿ 490 ಗಿಡಗಳನ್ನೂ 324 ಮೂಲಿಕೆಗಳನ್ನೂ ಚಿಕಿತ್ಸೆಗೆ ಬರುವಂಥವೆಂದು ಹೇಳಿದೆ; ಮದನಪಾಲ ನಿಘಂಟು 870 ಔಷಧಿಗಳನ್ನು ಪಟ್ಟಿಮಾಡುತ್ತದೆ. ಬೃಹನ್ನಿಘಂಟುರತ್ನಾಕರವಲ್ಲಂತೂ 1600 ಔಷಧಿಯ ಗಿಡಮರಗಳು! ಬರುಬರುತ್ತ ವೈದ್ಯರು ಹಲವಾರು ಹೊಸ ಔಷಧಿಗಳನ್ನು ಅರಿತು

ಕೊಂಡು, ಈಗ ಆಯುರ್ವೇದದಲ್ಲಿ ಎರಡು ಸಾವಿರಕ್ಕೂ
ಮೀರಿದ ಔಷಧಿವರ್ಗದ ಗಿಡಮರಗಳಿವೆ. ಇವುಗಳಲ್ಲಿ ಸುಮಾರು
ಐನೂರರಷ್ಟು ಬರಿಯ ಕ್ರಿಮಿನಾಶಕಗಳು; ಮತ್ತೆ ಒಂದು
ನೂರರಷ್ಟು ವಿಷದೂಷಣಿಗಳು, ಎಂದರೆ ವಿಷವನ್ನು ಹೋಗ
ಲಾಡಿಸುವುವು. ಸಾಮಾನ್ಯವಾಗಿ ಮದ್ದಿಗೆ ಬರುವಂಥವು
660 ಗಿಡಗಳು ಎಂದು ಅಂದಾಜು ಮಾಡಿದ್ದಾರೆ. ನೂರಾರು
ವರ್ಷಗಳಿಂದ ವೈದ್ಯರ ದಿನಬಳಕೆಯಲ್ಲಿರುವುವೇನೋ ಸುಮಾರು
ಇನ್ನೂರು ಅಷ್ಟೇ. ಆದರೆ ನಂಬಿಕೆಯಂತೂ ಮದ್ದಿನ ಗುಣ
ವಿಲ್ಲದ ಗಿಡವೇ ಇಲ್ಲ ಎಂದು.

ಆಯುರ್ವೇದದಲ್ಲಿ ಗಿಡಮರಗಳನ್ನೇ ಮದ್ದಿಗೆ ಹೆಚ್ಚಾಗಿ
ಬಳಸುವ ಕಾರಣವೇನು ? ಮನುಷ್ಯನ ದೇಹದಂತೆಯೇ ಗಿಡ
ಮರಗಳು ಪಾಂಚಭೌತಿಕವಾದುವು ಮೇಲಾಗಿ ಮನುಷ್ಯ
ರಂತೆಯೇ ಅವೂ 'ಸೇಂದ್ರಿಯ'ಗಳು, ಎಂದರೆ ಕೆಲವು ಇಂದ್ರಿಯ
ಗಳನ್ನು ಪಡೆದುಕೊಂಡಿದ್ದು ಒಳಗಿನ ಅರಿವೂ ಇದ್ದು, ಸುಖ–
ದುಃಖಗಳನ್ನು ಅನುಭವಿಸುವಂಥವು. ಹೀಗಿರುವುದರಿಂದ
ಅವು ಔಷಧಿರೂಪವಾಗಿ ನಮ್ಮ ದೇಹವನ್ನು ಸೇರಿದರೆ ಅನು
ಕೂಲವೇ ವಿನಾ ತೊಂದರೆಯೇನೂ ಇರದು. ಮನುಷ್ಯನು
ಕೃತ್ರಿಮವಾಗಿ ತಯಾರಿಸಿದ ರಸಾಯನಿಕಪದಾರ್ಥಗಳು ಹೀಗಲ್ಲ
ಮನುಷ್ಯನ ಶರೀರಕ್ಕೆ ಅವು ಹೊಂದಿಕೊಳ್ಳದೆ ಇರಬಹುದು
ಶರೀರದಲ್ಲಿ ಅರಗದೆ, ಇಂಗದೆ, ಮಾರ್ಪಡದೆ ಇದ್ದುಕೊಂಡು
ಕಾಲಕ್ರಮದಲ್ಲಿ ತೊಂದರೆಯನ್ನುಂಟುಮಾಡಬಹುದು.

ಗಿಡಮರಗಳಿಂದ ಮದ್ದನ್ನು ಮಾಡುವುದು ಸುಲಭ
ವೈದ್ಯನೇ ಅಗತ್ಯ ಬಿದ್ದಂತೆ ಔಷಧಿಗಳನ್ನು ತಯಾರಿಸಿಕೊಂಡ

ಬೇಕಾಗಿದ್ದುದರಿಂದ 'ಭೈಷಜ್ಯಕಲ್ಪ' ಸುಲಭವಾಗಿರಬೇಕಲ್ಲವೆ ? ಅಲ್ಲದೆ, ವೈದ್ಯನು ಹೇಗೆ ಮಾಡಬೇಕೆಂದು ತಿಳಿಸಿದರೆ, ಲೇಹ್ಯ, ಸ್ವರಸ, ಕಷಾಯ, ಚೂರ್ಣ ಮೊದಲಾದವನ್ನು ರೋಗಿಯು ಮನೆಯಲ್ಲೇ ಮಾಡಿಕೊಳ್ಳಬಹುದು. ವಿಶೇಷವಾದ, ಬೆಲೆ ಬಾಳುವ ದ್ರವ್ಯಗಳೂ ಉಪಕರಣಗಳೂ ಬೇಕಾಗಿಲ್ಲ. ಮತ್ತೆ, ರೋಗಿಯು ಮದ್ದನ್ನು ಸೇವಿಸುವಾಗ ಅದರ ಅಳತೆ ಸ್ವಲ್ಪ ಹೆಚ್ಚು-ಕಡಮೆಯಾದರೂ ತೊಂದರೆಯೇನಿಲ್ಲ. ದೇಹಕ್ಕೆ ಅಪಾಯವಾಗುವಂಥ ಪದಾರ್ಥಗಳು ವನಸ್ಪತಿಗಳಲ್ಲಿರುವುದು ಕಡಮೆ.

ಔಷಧಿಗಳು ತಮ್ಮ ಸ್ವರೂಪದಲ್ಲಿ ಆಹಾರವೇ ಆದುದರಿಂದ, ಅವು ದೇಹದಲ್ಲಿ ಸೇರಿದಾಗ ಒಂದಿಲ್ಲೊಂದು ಬಗೆಯಲ್ಲಿ ಉಪಕಾರವನ್ನೇ ಮಾಡುತ್ತವೆ ಧಾತುಗಳನ್ನು ಪೋಷಣೆ ಮಾಡುತ್ತವೆ, ಇಲ್ಲವೇ ಮಲಗಳನ್ನು ಹೊರದೂಡುತ್ತವೆ, ಅಥವಾ ವಾತ, ಪಿತ್ತ, ಕಫಗಳನ್ನು ಸರಿಪಡಿಸುತ್ತವೆ. ಒಂದು ವೇಳೆ ರೋಗಕ್ಕೆ ಸರಿಯಾದ ಮದ್ದು ಅಲ್ಲದಿದ್ದರೂ ಚಿಂತೆಯಿಲ್ಲ; ದೇಹಕ್ಕೆ ಅದರಿಂದ ಬೇರೆಬಗೆಯಾಗಿ ಒಳಿತೇ. ರೋಗಕ್ಕೆ ಸರಿಯಾದ ಮದ್ದಾದರಂತೂ ಇಬ್ಬಗೆಯ ಲಾಭ!

ಮೇಲಾಗಿ, ಆಯುರ್ವೇದ ಚಿಕಿತ್ಸೆಯಲ್ಲಿ ಆಹಾರವೂ ಔಷಧವಾಗಬಲ್ಲುದು. ಅಡುಗೆಮನೆಯಲ್ಲಿ ಸಾಮಾನ್ಯವಾಗಿ ಬಳಸುವ ಸಂಬಾರ ಪದಾರ್ಥಗಳೂ, ಮಸಾಲೆ ದ್ರವ್ಯಗಳೂ, ಕಾಳು-ಬೇಳೆಗಳೂ, ಧಾನ್ಯಗಳೂ ಹದವರಿತು ಔಷಧವಾಗುತ್ತವೆ. ಸಂಪ್ರದಾಯದಲ್ಲಿ ಬಂದಿರುವ ಅಡುಗೆ-ಪದ್ಧತಿಗಳೂ, ಊಟದ ಪದ್ಧತಿಗಳೂ ಎಷ್ಟರಮಟ್ಟಿಗೆ ಆರೋಗ್ಯಕ್ಕೆ ಹೊಂದಿಕೊಳ್ಳು

ತ್ತವೆ, ಆರೋಗ್ಯವನ್ನು ಕಾಯುತ್ತವೆ ಎಂಬುದನ್ನೂ ಆಲೋಚನೆ
ಮಾಡಿದರೆ ಹಿಂದಿನವರ ಜಾಣತನಕ್ಕೆ ಅಚ್ಚರಿಪಡುತ್ತೇವೆ.
ಹಳೆಯಕಾಲದ ಊಟ-ಉಪಚಾರಗಳ ಸ್ವಾರಸ್ಯವನ್ನು ಈಗ
ಮರೆತು ಹಲವು ರೋಗಗಳಿಗೆ ತುತ್ತಾಗಿದ್ದೇವೆಯೋ ಏನೋ
ಎಂದೆನಿಸುತ್ತದೆ.

ಕಳೆದ ತಲೆಮಾರಿನ ವೈದ್ಯರಲ್ಲಿ ಹಿರಿಯರಾಗಿದ್ದ ಆದ್ಯ
ಅನಂತಾಚಾರ್ಯರು ಇತರ ಮದ್ದುಗಳಿಗಿಂತ ಗಿಡಮರಗಳ
ಮದ್ದು ಹೇಗೆ ಉತ್ತಮವೆಂದು ಹೇಳುವ ಶ್ಲೋಕವೊಂದನ್ನು
ರಚಿಸಿದ್ದಾರೆ-

> ಸಹಜತ್ವಾತ್ ಸೇಂದ್ರಿಯತ್ವಾತ್ ಸ್ವದೇಶಿತ್ವೇನ ಸಾಮ್ಯತಃ ।
> ಸೌಲಭ್ಯಾತ್ ಸರ್ವಲೋಕಾನಾಂ ಲಾಭಾಚ್ಚಾಲ್ಪಶ್ರಮೇಣ ಚ ।
> ಮೂಲ್ಯೇನಾಲ್ಪೇನ ಲಭ್ಯತ್ವಾಚ್ಛೀಘ್ರಂ ರೋಗಾಪಹಾರತಃ ।
> ಚಿಕಿತ್ಸೌಷಧಿಜಾ ದೈವೀ ನೈವಾನ್ಯಾ ಸಾ ರಸಾದಿಜಾ ॥

ಆಯುರ್ವೇದದಲ್ಲಿ ಬಳಸುವ ವನಸ್ಪತಿಗಳು ಸಹಜವಾದುವು
ಮನುಷ್ಯ ತಯಾರಿಸಿದುದಲ್ಲ; ಅವುಗಳು ನಮ್ಮಂತೆಯೇ
'ಸೇಂದ್ರಿಯ'ಗಳು. ಅವು ನಮ್ಮ ದೇಶದವೇ, ನಮ್ಮ ಶರೀರಕ್ಕೆ
ಒಗ್ಗಿಬಂದಿರುವುವು. ಅವನ್ನು ಜನರು ಎಲ್ಲಿಯಾದರೂ ಪಡೆದು
ಕೊಳ್ಳಬಹುದು, ಕಷ್ಟಪಟ್ಟು ಹುಡುಕಾಡಬೇಕಿಲ್ಲ. ಅವುಗಳನ್ನು
ಕೊಳ್ಳಬೇಕೆಂದರೂ ಬೆಲೆ ಅಗ್ಗವೇ, ಬಡವರಿಗೂ ಸಿಗುವಂಥವು
ಮತ್ತು ರೋಗವನ್ನು ಬೇಗನೆ ಗುಣಪಡಿಸುತ್ತವೆ. ಇಷ್ಟೂ
ಗುಣಗಳಿರುವುದರಿಂದ ಇದನ್ನು 'ದೈವೀಚಿಕಿತ್ಸೆ'ಯೆನ್ನಬಹುದು
ಇದು ಶ್ಲೋಕದ ತಾತ್ಪರ್ಯ.

ಚಿಕಿತ್ಸೆಯಲ್ಲಿ ದೈವೀ, ಮಾನುಷೀ, ಆಸುರೀ ಎಂದು ತಾರತಮ್ಯ ಕ್ರಮದಲ್ಲಿ ಮೂರು ಬಗೆಗಳನ್ನು ಹೇಳುತ್ತಾರೆ. ದೈವೀ ಎಂದರೆ ದೇವತೆಗಳಿಗೆ ತಕ್ಕದ್ದು ; ಮುಪ್ಪನ್ನು ಎದುರಿಸಿ, ಸಾವನ್ನು ದೂರ ಅಟ್ಟುವ ಧಾತು, ಭಸ್ಮ ಮೊದಲಾಗಿ ರಸಾಯನ ಚಿಕಿತ್ಸೆ. ಮಾನುಷೀ ಎಂದರೆ ಸಾಮಾನ್ಯ ಮನುಷ್ಯರದ್ದು ; ಗಿಡಮರಗಳನ್ನು ಬಳಸಿಕೊಂಡು ಕಷಾಯ ಮೊದಲಾದುವುಗಳಿಂದ ಮಾಡುವ ಚಿಕಿತ್ಸೆ. ಆಸುರೀ ಎಂದರೆ ರಾಕ್ಷಸರಿಗೆ ತಕ್ಕದ್ದು ; ಕತ್ತರಿ, ಚಾಕು, ಸೂಜಿ ಮೊದಲಾದ ಆಯುಧಗಳನ್ನು ಉಪಯೋಗಿಸಿ ಮೈಯನ್ನು ಕತ್ತರಿಸಿ ಮಾಡುವ ಶಸ್ತ್ರ ಚಿಕಿತ್ಸೆ, ಅಥವಾ ಮೈಭಾಗಗಳನ್ನು ಸುಡುವ ಅಗ್ನಿಕರ್ಮ, ಕ್ಷಾರಕರ್ಮಗಳು. ರಸಾಯನ ಚಿಕಿತ್ಸೆ ದೈವಿಯೆನಿಸಿಕೊಂಡರೂ ಕಷ್ಟಸಾಧ್ಯವಾದುದು ; ಚಿಕಿತ್ಸೆ ಸುಲಭವಾಗಿರಬೇಕೆನ್ನುವವರಿಗೆ ಅದಲ್ಲ, ಅದಕ್ಕೆ ಬೇಕಾಗುವ ದ್ರವ್ಯಗಳೂ ಬಹಳ ಬೆಲೆ-ಬಾಳುವಂಥವು, ಬೇಗ ಸಿಗುವಂಥವಲ್ಲ ; ಬಡವರಿಗೆ ಎಟುಕುವುವಲ್ಲ. ಮೇಲಾಗಿ, ಅದರ ಕಟ್ಟುಪಾಡು ಕಠಿಣ ; ಸ್ವಲ್ಪ ಮೈ ಮರೆತರೂ ಸಡಿಲವಾದರೂ ಅಪಾಯವಿದೆ. ಹೀಗಿರುವುದರಿಂದಲೇ ರಸಾಯನ ಚಿಕಿತ್ಸೆ ಬರುಬರುತ್ತಾ ಮರೆಯಾಗುತ್ತಿದೆ. ಮೇಲಿನ ಶ್ಲೋಕವು ಗಿಡಮರಗಳ ಮದ್ದನ್ನೇ ದೈವಿಯೆಂದು ಕರೆದಿರುವುದು ಈ ಕಾರಣಗಳಿಂದ.

ವೈದ್ಯಕ್ಕೆ ನೆರವಾಗುವ ಗಿಡಮರಗಳ ಆಕಾರ, ಜಾತಿ, ವರ್ಣ, ವೀರ್ಯ, ರಸ, ಪ್ರಭಾವ ಮೊದಲಾದ ಗುಣಗಳನ್ನೆಲ್ಲ ಹೇಳುವ ನಿಘಂಟುಗಳು ಆಯುರ್ವೇದದಲ್ಲಿ ಮುಖ್ಯವಾದುವು. ವ್ಯಾಕರಣವಿಲ್ಲದ ವಿದ್ವಾಂಸ, ಅಭ್ಯಾಸವಿಲ್ಲದ ಬಿಲ್ಲುಗಾರ,

ನಿಘಂಟುವಿಲ್ಲದ ವೈದ್ಯ ಈ ಮೂವರೂ ಅಪಹಾಸ್ಯಕ್ಕೀಡಾ
ವರೆಂದು ಹೇಳುವ ಮಾತೊಂದಿದೆ. ಈ ನಿಘಂಟುಗಳಲ್ಲಿ ದ್ರ
ಗುಣ, ದೋಷವೈಷಮ್ಯ, ಚಿಕಿತ್ಸಾತತ್ವಗಳನ್ನು ಒಂದೊಂ
ವನಸ್ಪತಿಗೂ ಹೇಳುತ್ತಾರೆ. ಮದ್ದುಗಳಿಗೆ ಬೇರೆ ಬೇರೆ ದ
ಭಾಷೆಗಳಲ್ಲಿ ಹೆಸರುಗಳು, ಮದ್ದುಗಳನ್ನು ಮಾಡುವ ಬ
ಅಳತೆ, ತೂಕ, ಪಾರಿಭಾಷಿಕ ಪದಗಳು ಇವೆಲ್ಲವೂ ಸೇರಿ ನಿಘಂ
ಅಭ್ಯಾಸಮಾಡುವ ವೈದ್ಯರಿಗೆ ತುಂಬ ಉಪಯೋಗವಾಗುತ್ತ
ಧನ್ವಂತರೀನಿಘಂಟೆಂಬುದು ಉಳಿದುಬಂದಿರುವ ನಿಘಂಟುಗಳ
ತೀರ ಹಳೆಯದು ; ಕ್ರಿಸ್ತಾಬ್ದ ಆರನೆಯ ಶತಮಾನದ್ದೆಂ
ಹೇಳುತ್ತಾರೆ. ಚರಕನ ಕಾಲದಿಂದಲೂ ನಿಘಂಟುಗಳಿದ್ದ
ತಿಳಿದುಬರುತ್ತದೆ. ಈಗ ಬಳಕೆಯಲ್ಲಿರುವ ಸುಮಾರು ಇಪ್ಪತ
ನಿಘಂಟುಗಳಲ್ಲಿ ಮದನಪಾಲ ನಿಘಂಟು (1374), ನರಹರಿ
ರಾಜ ನಿಘಂಟು (1400), ಭಾವ ಮಿಶ್ರನ ಗುಣರತ್ನಮಾ
ಇವು ಮುಖ್ಯವಾದವು.

# ೮. ರೋಗಿಗಳ ಪರೀಕ್ಷೆ

ರೋಗವನ್ನು ಪರೀಕ್ಷೆ ಮಾಡಿ ಅನಂತರ ಚಿಕಿತ್ಸೆ ಮಾಡ ಬೇಕೆನ್ನುವುದು ಎಲ್ಲ ವೈದ್ಯದ ನಿಲುವೇ. ರೋಗ ಮೊದಲು ಒದಗಿದುದು ಹೇಗೆ, ಹರಡಿಕೊಂಡುದು ಹೇಗೆ, ಕಾಣಿಸಿ ಕೊಂಡುದು ಹೇಗೆ, ಅದರಿಂದ ಉಂಟಾಗಿರುವ ತೊಂದರೆಗಳೇನು ಈ ವಿವರಗಳನ್ನು ಅರಿತುಕೊಂಡ ಮೇಲಲ್ಲವೆ ಆ ರೋಗಕ್ಕೆ ಮದ್ದೇನು, ಮದ್ದನ್ನು ಕೊಡುವುದು ಹೇಗೆ, ಮದ್ದು ಮಾಡುವ ಕೆಲಸವೇನು ಎಂದು ನಿರ್ಧರಿಸುವುದು? ಹೀಗೆ ರೋಗದ ವಿಚಾರವನ್ನು ಅರಿತುಕೊಳ್ಳುವುದಕ್ಕೆ ಆಯುರ್ವೇದದಲ್ಲಿ 'ನಿದಾನ'ವೆಂದು ಹೆಸರು; 'ರೋಗ ನಿಶ್ಚಯ'ವೆಂದೂ ಕರೆಯು ತ್ತಾರೆ. ರೋಗದ ಲಕ್ಷಣಗಳು ಮಾತ್ರ ಮರೆಯಾದರೆ ಸಾಲದು. ರೋಗದ ಕಾರಣವೂ ಮರೆಯಾಗುವಂತೆ ಮಾಡುವುದೇ ಚಿಕಿತ್ಸೆ; ಇದನ್ನು 'ನಿದಾನಪರಿವರ್ಜನ'ವೆನ್ನುತ್ತಾರೆ.

ರೋಗದ ಕಾರಣ, ಲಕ್ಷಣಗಳನ್ನು ತಿಳಿದುಕೊಳ್ಳಲು ರೋಗಿಯ ಪರೀಕ್ಷೆ ಮಾಡಬೇಕು. ಇದಕ್ಕೆ ನೆರವಾಗಲೆಂದೇ ಶಾಸ್ತ್ರಗಳು 'ನಿದಾನ'ವೆಂಬ ಪ್ರಕ್ರಿಯೆಯನ್ನು ಬೆಳೆಸಿವೆ. ಚಿಕಿತ್ಸೆಯಲ್ಲಿ ಮೂರು ಬಗೆಗಳಂತೆ—ದೈವವ್ಯಪಾಶ್ರಯ, ಸತ್ತ್ವಾವ ಜಯ ಮತ್ತು ಯುಕ್ತಿವ್ಯಪಾಶ್ರಯ ಎಂದು. ಈ ಮನು ಷ್ಯನ ನೆಲೆಯನ್ನು ಮೀರಿರುವ ದೇವತೆಗಳನ್ನು ಒಲಿಸಿಕೊಂಡು ನಮಗೆ ಬಂದಿರುವ ರೋಗಗಳನ್ನು ಪರಿಹರಿಸಿಕೊಳ್ಳುವುದು

‘ದೈವವ್ಯಪಾಶ್ರಯ’ ಚಿಕಿತ್ಸೆ; ಮಣಿ, ಮಂತ್ರ, ಬಲಿ, ಹೋಮ
ಇತ್ಯಾದಿ. ಇದಕ್ಕೆ ರೋಗದ ಕಾರಣ, ಲಕ್ಷಣಗಳನ್ನು ತಿಳಿದು
ಕೊಳ್ಳಬೇಕಾದ ಅಗತ್ಯವಿಲ್ಲ. ಎರಡನೆಯ ‘ಸತ್ತ್ವಾವಜಯ’
ವೆನ್ನುವುದು ಯೋಗಮಾರ್ಗವನ್ನು ಹಿಡಿದು ಮನಸ್ಸನ್ನು
ಗೆದ್ದುಕೊಂಡು ಆದರಿಂದ ಶರೀರದ ರೋಗಗಳನ್ನು ಕಳೆದು
ಕೊಳ್ಳುವುದು. ಇದಕ್ಕೂ ‘ನಿದಾನ’ದ ಅಗತ್ಯ ಅಷ್ಟಾಗಿ
ಇರದು. ಮೂರನೆಯ ‘ಯುಕ್ತಿವ್ಯಪಾಶ್ರಯ’ದಲ್ಲಿ ಮನು
ಷ್ಯನ ಬುದ್ಧಿಶಕ್ತಿಯಿಂದ ರೋಗದ ಇತಿಮಿತಿಗಳನ್ನು ಅರಿತು
ಕೊಂಡು ಅದಕ್ಕೆ ತಕ್ಕಂತೆ ಮದ್ದು ಮಾಡುವುದು. ಸಾಮಾನ್ಯ
ವಾಗಿ ಆಯುರ್ವೇದವೆಂದರೆ ಇದೇ. ಔಷಧಿಗಳ ಉಪಯೋಗ
ವಿರುವುದು ಇಲ್ಲಿಯೇ, ಸ್ವಸ್ಥವೃತ್ತವನ್ನು ಹೇಳುವುದು
ಇಲ್ಲಿಯೇ. ಇದಕ್ಕೆ ‘ನಿದಾನ’ದ ಅಗತ್ಯ ಉಂಟೇ ಉಂಟು;
ರೋಗಿಯ ಪರೀಕ್ಷೆ ಮಾಡದೆ ಚಿಕಿತ್ಸೆ ಮಾಡಲಾಗುವುದಿಲ್ಲ.

ಆಯುರ್ವೇದದಲ್ಲಿ ‘ಅಷ್ಟಸ್ಥಾನ ಪರೀಕ್ಷೆ’ಯೆಂದು ಬಳಕೆ
ಯಲ್ಲಿದೆ. ರೋಗವು ಕಾಣಿಸಿಕೊಳ್ಳುವ ಶರೀರದ ಎಂಟು ಸ್ಥಳ
ಗಳಲ್ಲಿ ಪರೀಕ್ಷೆ ಮಾಡುವುದೆಂದು ಈ ಮಾತಿನ ಅರ್ಥ. ಕಣ್ಣು,
ನಾಲಗೆ, ಶಬ್ದ, ಸ್ಪರ್ಶ, ಮಲ, ಮೂತ್ರ, ಸ್ವರೂಪ ಮತ್ತು
ನಾಡಿ ಇವೇ ಎಂಟು ಸ್ಥಾನಗಳು. ಕಣ್ಣಿನ ಬಣ್ಣ, ಹೊಳಪು,
ಜಿಡ್ಡು, ಚಾಂಚಲ್ಯ ಮೊದಲಾದುವನ್ನು ವೈದ್ಯನು ನೋಡಿ
ಯಾವ ದೋಷದ ಪ್ರಭಾವ ಶರೀರದಲ್ಲಿದೆ ಎಂಬುವನ್ನು ಕಂಡು
ಕೊಳ್ಳುತ್ತಾನೆ. ಹಾಗೆಯೇ ರೋಗಿಯ ನಾಲಗೆಯ ಬಣ್ಣ,
ಅಂಟು, ಪದರ, ಶಾಖ, ಒರಟುತನ ಮುಂತಾದುವನ್ನೂ, ಅವನ
ಶಬ್ದದ ಬಿರುಸು, ತೊದಲು, ಏರಿಳಿತ, ಒಡಕು ಮೊದಲಾದು

ವನ್ನೂ; ಮೈ ಶಾಖ, ನಯ, ಚರ್ಮದ ಲಕ್ಷಣ, ಮೊದಲಾದು ವನ್ನೂ; ಮಲದ ಬಣ್ಣ, ತೆಳುವು, ನೊರೆ, ಒಕ್ಕೆ ಮೊದಲಾದ ಗುಣಗಳನ್ನೂ; ಮೂತ್ರದ ಬಣ್ಣ, ಬುರುಗು, ಶಾಖ, ಉರಿ ಮೊದಲಾದುವನ್ನೂ: ಇದೀ ದೇಹದ ಸ್ವರೂಪವನ್ನೂ (ಮೈಮಾಟ, ಮೈಬಣ್ಣ, ಮುಖದ ಕಾಂತಿ, ಅಂಗಾಂಗಗಳ ಸೆಂಟು, ನಡೆದಾಡುವ ಕುಳಿತು ನಿಲ್ಲುವ ಬಗೆ, ಗಾಯಗಳು, ಗಂಟೆಗಳು, ದಣಿವು ಇತ್ಯಾದಿ) ವೈದ್ಯನು ಪರೀಕ್ಷೆಮಾಡಿ ಅರಿತುಕೊಳ್ಳುತ್ತಾನೆ.

ನಾಡೀ ಪರೀಕ್ಷಿಸುವುದು ಈಗ ಆಯುರ್ವೇದದಲ್ಲಿ ಮುಖ್ಯವಾದ ವಿಧಾನವಾಗಿದೆ. ಆದ್ದರಿಂದ ಅದರ ವಿಚಾರ ವಾಗಿ ಸ್ವಲ್ಪ ಹೇಳಬೇಕಾದ ಅಗತ್ಯವಿದೆ. ವೇದ ಕಾಲದಲ್ಲಿ ಯಾಗಲೀ ಚರಕ, ಸುಶ್ರುತ, ವಾಗ್ಭಟರ ಕಾಲದಲ್ಲಿಯಾಗಲೀ ನಾಡೀಪರೀಕ್ಷೆ ಬಳಕೆಯಲ್ಲಿದ್ದಂತೆ ತೋರುವುದಿಲ್ಲ. ಆಯು ರ್ವೇದ ಗ್ರಂಥಗಳಲ್ಲಿ ನಾಡೀಪರೀಕ್ಷೆ ಮೊಟ್ಟಮೊದಲು ಕಾಣಿಸಿ ಕೊಳ್ಳುವುದು ಶಾರ್ಙ್ಗಧರ ಸಂಹಿತೆಯಲ್ಲಿ. ಇದು ಕ್ರಿಸ್ತಾಬ್ದ ಹದಿಮೂರನೆಯ ಶತಮಾನದ ಗ್ರಂಥ. ಇದರಲ್ಲೇ ಮೊದಲ ಬಾರಿಗೆ ಅಫೀಮಿನ (ಅಹಿಫೇನದ) ವೈದ್ಯಕೀಯ ಪ್ರಸ್ತಾಪವೂ ಬಂದಿದೆ. ಅಫೀಮಿನ ಬಳಕೆಯಂತೆ ನಾಡೀಪರೀಕ್ಷೆಯೂ ಗ್ರೀಕ್ ವೈದ್ಯದಲ್ಲಿದ್ದು ಯುನಾನೀ ಪದ್ಧತಿಯ ಮೂಲಕವಾಗಿ ಈ ಕಡೆ ಹರಡಿತೆಂದು ಹೇಳಬಹುದು. ಕ್ರಿಸ್ತಪೂರ್ವ 340ರ ಸುಮಾರಿಗೆ ಪ್ರಾಕ್ಸಗೊರಸ್ ಎಂಬುವನು ನಾಡೀಪರೀಕ್ಷೆಯನ್ನು ಗ್ರೀಕ್ ವೈದ್ಯದಲ್ಲಿ ಒಳಕೆಗೆ ತಂದನೆಂದು ತಿಳಿದುಬಂದಿದೆ.

ನಾಡಿಯು ಉಲ್ಲೇಖವೇನೋ ಋಗ್ವೇದದಲ್ಲಿಯೇ ಇದೆ
ಅದರ ವರ್ಣನೆ ಅಥರ್ವವೇದದಲ್ಲಿ ಬರುತ್ತದೆ. ಯೋ
ದಲ್ಲಿಯೂ ತಂತ್ರದಲ್ಲಿಯೂ ನಾಡೀಪ್ರಕ್ರಿಯೆಯಿದೆ. ಆದ
ಅದರ ಪರೀಕ್ಷೆಯಿಂದ ರೋಗದ ಲಕ್ಷಣವನ್ನು ಗುರುತಿಸಬಹ
ದೆಂಬ ಕಲ್ಪನೆ ಅಷ್ಟು ಹಳೆಯದಲ್ಲ. ನಾಡೀಪರೀಕ್ಷೆಯನ
ಆಯುರ್ವೇದ ಅಳವಡಿಸಿಕೊಂಡ ಮೇಲೆ ಅದೇ ಒಂದು ದೊಡ
ಶಾಸ್ತ್ರವಾಗಿ ಬೆಳೆಯಿತು. ಗ್ರೀಕ್ ವೈದ್ಯದಲ್ಲಾಗಲೀ, ಅದ
ಆಧಾರದ ಮೇಲೆ ಮುಂದೆ ಬೆಳೆದುನಿಂತ ಪಾಶ್ಚಾತ್ಯ ವೈದ್ಯ
ಲ್ಲಾಗಲೀ ತೋರಿಕೊಳ್ಳದ ಹಲವು ಸೂಕ್ಷ್ಮವಾದ ವಿವರಗಳ
ಆಯುರ್ವೇದದ ನಾಡೀಪರೀಕ್ಷೆಯಲ್ಲಿ ಪ್ರಕಟವಾದುವು.

ಗಂಡಸಿನ ಬಲಮುಂಗೈ, ಹೆಂಗಸಿನ ಎಡಮುಂಗ
ಮಣಿಕಟ್ಟಿನಲ್ಲಿ, ಹೆಬ್ಬೆರಳ ಬುಡದಲ್ಲಿ 'ಜೀವಸಾಕ್ಷಿಣಿ'ಯಾ
ಬಡಬಡಿಸುತ್ತಿರುವ ರಕ್ತ ಧಮನಿಯನ್ನೇ ನಾಡಿಯೆನ್ನುತ್ತಾರ
ಇದು ಮುಖ್ಯವಾದ ನಾಡೀಸ್ಥಾನ; ನಾಡಿಯನ್ನು ಶರೀರ
ಹದಿನಾಲ್ಕು ಎಡೆಗಳಲ್ಲಿ ಗುರುತಿಸಬಹುದು. ವೈದ್ಯನ
ರೋಗಿಯ ಮಣಿಕಟ್ಟಿನಲ್ಲಿರುವ ನಾಡಿಯನ್ನು ಗುರುತಿಸಿ ಅದ
ಮೇಲೆ ತನ್ನ ಬಲಗೈಯ ತೋರುಬೆರಳು (ತರ್ಜನೀ), ನಡ
ಬೆರಳು (ಮಧ್ಯಮಾ) ಮತ್ತು ಅದರ ಪಕ್ಕದ ಉಂಗುರ–ಬೆರಳ
(ಅನಾಮಿಕ) ಈ ಮೂರು ಬೆರಳುಗಳನ್ನು ಒತ್ತಿ ಹಿಡಿದ
ಗಮನಿಸಿದರೆ, ರೋಗಿಯ ಶರೀರದಲ್ಲಿ ವಾತ, ಪಿತ್ತ, ಕಫಗಳೆಂ
ಮೂರೂ ದೋಷಗಳ ಸ್ಥಿತಿ–ಗತಿಗಳು ತಿಳಿದು ಬರುತ್ತವ
ತೋರು ಬೆರಳಿಗೆ ವಾತವೂ, ನಡುಬೆರಳಿಗೆ ಪಿತ್ತವೂ, ಉಂಗುರ
ಬೆರಳಿಗೆ ಕಫವೂ ಗೋಚರವಾಗುವುದೆಂದು ಕೆಲವ
ಅಭಿಪ್ರಾಯ.

ಆರೋಗ್ಯವಾಗಿರುವವನ ನಾಡಿಯು ಮೂರು ಎಡೆಗಳಲ್ಲಿ (ಎಂದರೆ ಮೂರು ದೋಷಗಳು ಗೋಚರವಾಗುವ ಸ್ಥಳಗಳಲ್ಲಿ) ಧಮನಿಯು ಬಡಬಡಿಸುವುದು ಒಂದೇ ತೆರನಾಗಿರುವುದು. ಎಡೆಗಳಲ್ಲಾಗಲೀ ಬಡಬಡಿಸುವ ಬಗೆಗಳಲ್ಲಾಗಲೀ ಹೆಚ್ಚು-ಕಡಮೆಯಾದರೆ ಅದನ್ನು ರೋಗನಾಡಿಯೆನ್ನುತ್ತಾರೆ. ದೋಷ ವೈಷಮ್ಯಕ್ಕೆ ಅದು ಕುರುಹು. ಯಾವ ದೋಷವು ಹೇಗೆ ವಿಷಮವಾಗಿದೆಯೆಂದು ತಿಳಿದುಕೊಳ್ಳುವುದೇ ನಾಡೀಪರೀಕ್ಷೆಯ ಉದ್ದೇಶ. ಈ ವಿಚಾರವಾಗಿ ಹಲವು ಗ್ರಂಥಗಳಿದ್ದರೂ, ಇದು ತುಂಬ ಕಷ್ಟವಾದ ಪರೀಕ್ಷೆ. ಅಭ್ಯಾಸದಿಂದಲೂ, ಸಮರ್ಥರಾದ ಗುರುಗಳಿಂದಲೂ ತಿಳಿಯಬೇಕಾದ ಶಾಸ್ತ್ರ ಇದು. ಮೇಲಾಗಿ ಅನುಭವ, ಅವಧಾನ, ಪ್ರತಿಭೆ ನಾಡೀಪರೀಕ್ಷೆಯಲ್ಲಿ ಮುಖ್ಯವಾಗುತ್ತವೆ; ಇದೊಂದು ಕಲೆಯೂ ಹೌದು ಎಂದರೂ ಒಪ್ಪುತ್ತದೆ.

ರೋಗದ ಕಾರಣವಾದ 'ನಿದಾನ'ದ ಕಲ್ಪನೆ ಆಯುರ್ವೇದದಲ್ಲಿ ಚೆನ್ನಾಗಿ ಬೆಳೆದಿದೆ. ರೋಗ ಇನ್ನೂ ಬಯಲಾಗದೆ ದೋಷ ಯಾವುದೆಂಬುದು ಸ್ಪಷ್ಟವಾಗದೆ ಶರೀರದಲ್ಲೇ ಅಡಗಿಕೊಂಡಿರುವುದು ರೋಗದ ಮೊದಲ ರೂಪ ('ಪೂರ್ವರೂಪ') ಅನಂತರ ದೋಷ ಸ್ಪಷ್ಟವಾಗಿ, ರೋಗದ ಲಕ್ಷಣಗಳು ಹೊರಗೆ ಕಾಣಿಸಿಕೊಳ್ಳತೊಡಗಿದಾಗ ಅದನ್ನು 'ರೂಪ'ವೆನ್ನುತ್ತಾರೆ; ಇದು ರೋಗದ ಆಕಾರ. ರೋಗದ ಹಿಂಬದಿಯಲ್ಲಿರುವ ದೋಷವು ಇನ್ನೂ ಸ್ಪಷ್ಟವಾಗದಿದ್ದರೆ 'ಉಪಶಯ'ವೆಂಬ ಪರೀಕ್ಷೆಯಿಂದ ಅದನ್ನು ಅರಿತುಕೊಳ್ಳುತ್ತಾರೆ. ಇಲ್ಲಿ 'ಸಾತ್ಮ್ಯ' ಎನ್ನುವ ಮಾತು ಮುಖ್ಯವಾದುದು. ಯಾವುದಾದರೂ,

ಪದಾರ್ಥವನ್ನು ಅಡಿಗಡಿಗೆ ಬಳಸಿ ಶರೀರವು ಅದಕ್ಕೆ ಒ
ಹೋಗುವುದು, ಅದನ್ನು ಶರೀರವು ತನ್ನದಾಗಿ ಮಾಡಿಕೊಳ
ವುದು 'ಸಾತ್ಮ್ಯ'ವೆನಿಸಿಕೊಳ್ಳುತ್ತದೆ. ''ಉಪಶಯವು ಸಾತ್
ಕ್ಕಾಗಿ'' ಎನ್ನುವ ಮಾತು ಬಳಕೆಯಲ್ಲಿದೆ. ಯಾವ ದ್ರ
ವನ್ನಾದರೂ ಬಳಸಿ ಅದರಿಂದ ರೋಗಿಯು ತೊಂದರೆ ಕಡ
ಯಾಗುವುದಾದರೆ, ಅವನನ್ನು ಕಾಡುವ ದೋಷ ಯಾ
ದೆಂಬುದು ತಿಳಿದುಬರುತ್ತದೆ. ಮುಂದೆ 'ಸಂಪ್ರಾಪ್ತಿ' ಎನ
ವಲ್ಲಿ ರೋಗವು ಬೆಳೆದುಬಂದ ಬಗೆ ಸ್ಪಷ್ಟವಾಗುತ್ತದೆ.
ಐದು ಹಂತಗಳನ್ನು 'ನಿದಾನಪಂಚಕ' ಎಂದು ಕರೆಯುವ ವಾ
ಯಿದೆ.

ರೋಗವು ಬೆಳೆಯುವ ಬಗೆಯನ್ನು ಹೇಳುವಾಗ ದೋ
ಗಳು ಕೂಡಿಕೊಳ್ಳುವುದು ('ಸಂಚಯ'), ಆಯಾ
ಮೇಲೇಳುವುದು ('ಪ್ರಕೋಪ'), ಹರಡಿಕೊಳ್ಳುವು
('ಪ್ರಸರ') ಇವು ಮೂರು ದೋಷಗಳು ಸ್ಪಷ್ಟವಾಗು
ಕಾಲವೆಂದೂ; ರೋಗವು ಶರೀರದಲ್ಲಿ ಒಂದೆಡೆ ನೆಲೆಸುವು
('ಸ್ಥಾನಸಂಶ್ರಯ'), ರೋಗದ ಲಕ್ಷಣಗಳು ಕಾಣಿಸಿಕೊಳ
ವುದು ('ವ್ಯಕ್ತಿ'), ರೋಗ ಹರಡಿಕೊಳ್ಳುವಾಗ ಬೇರೆ ಬೇ
ರೂಪ ತಳೆಯುವುದು ('ಭೇದ') ಇವು ಮೂರು ರೋಗಗಳ
ತೋರಿಕೊಳ್ಳುವ ಕಾಲವೆಂದೂ ಆರು ತೆರನಾಗಿ ಹಂತಗಳನ
ಹೇಳುತ್ತಾರೆ.

## ೯. ಆರೋಗ್ಯದ ಊರುಗೋಲುಗಳು

ಮನುಷ್ಯನನ್ನು ರೋಗವು ಕಾಡುವುದಕ್ಕೆ ಮೂರು ಕಾರಣಗಳೆಂದು ಆಯುರ್ವೇದದ ನಂಬಿಕೆಯೆಂದು ಹಿಂದೆಯೇ ಹೇಳಿದೆವಲ್ಲವೆ ? ಇವುಗಳಲ್ಲಿ ಮೊದಲನೆಯದು ಶರೀರದ ಬಲವನ್ನು ಮೀರಿ ಬಳಲುವುದು. ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಗೆ ತಕ್ಕಂಥ ರೂಪ, ಶಬ್ದ ಮೊದಲಾದ ಹೊರಗಣ ವಿವರಗಳಿವೆಯಲ್ಲವೆ ? ಇವಕ್ಕೆ ಇಂದ್ರಿಯ–ಅರ್ಥಗಳೆಂದು ಹೆಸರು. ನಾವು ನೋಡುವಾಗ ಕಣ್ಣಿನ ಸ್ವಭಾವ, ಸಾಮರ್ಥ್ಯ, ಸುಖಗಳನ್ನು ಗಮನಿಸದೆ ನೋಡಿದ್ದೇ ಆದರೆ, ಹಾಗೆ ನೋಡಿದುದನ್ನು ಕಣ್ಣು ತನ್ನದಾಗಿ ಮಾಡಿಕೊಳ್ಳಲಾರದು ; ಅದರಿಂದ ಕಣ್ಣು ಬಳಲುವುದು ಸಹಜ. ಹೀಗೆಯೇ ಇತರ ಇಂದ್ರಿಯಗಳ ವಿಚಾರವೂ. ಇದನ್ನು 'ಅಸಾತ್ಮ್ಯ' ಎನ್ನುತ್ತಾರೆ. ತಡೆದುಕೊಳ್ಳಲಾರದಂಥ ಗಾಳಿ, ಮಳೆ, ಚಳಿ, ಬಿಸಿಲು, ಶಬ್ದ ಮೊದಲಾದವುಗಳಿಗೆ ಮೈಯೊಡ್ಡುವುದು ರೋಗಕ್ಕೆ ಕಾರಣವಾಗಬಲ್ಲುದಲ್ಲವೆ ? ಇದೇ 'ಅಸಾತ್ಮ್ಯೇಂದ್ರಿಯಾರ್ಥ ಸಂಯೋಗ'.

ಯಾವುದನ್ನು ಮಾಡಬೇಕು, ಯಾವುನ್ನು ಬಿಡಬೇಕು, ಏನನ್ನು ಮಾಡಿದರೆ ಶರೀರಕ್ಕೆ ಮತ್ತು ಮನಸ್ಸಿಗೆ ಒಳಿತು, ಏನನ್ನು ಮಾಡಿದರೆ ಇಂದು ಸುಖವೆನಿಸಿದರೂ ಮುಂದೆ ಕೆಡುಕಾದೀತು, ಯಾವುದು ಅಗತ್ಯ, ಯಾವುದು ಅನಗತ್ಯ, ಈ

ಯಾವ ಆಲೋಚನೆಯಾಗಲೀ ವಿವೇಕವಾಗಲೀ ಇಲ್ಲದೆ ಬದು
ಕನ್ನು ನಡೆಸುವುದು ರೋಗಕ್ಕೆ ಎರಡನೆಯ ಕಾರಣ. ಎಚ್ಚರ
ತಪ್ಪಿ, ಯಾವ ಶಿಸ್ತೂ ಇಲ್ಲದೆ, ಎಂಥ ಕಟ್ಟುಪಾಡೂ ಇರದಂತೆ
ಬಾಳಿದರೆ ಅದು ತನಗೂ ಹಿತವಲ್ಲ, ತನ್ನ ನೆರೆಯವರಿಗೂ ಹಿತ
ವಲ್ಲ. ಇದನ್ನು ಆಯುರ್ವೇದವು 'ಪ್ರಜ್ಞಾಪರಾಧ' ಎಂದು
ಕರೆಯುತ್ತದೆ. ಪುಣ್ಯ-ಪಾಪಗಳ, ಧರ್ಮ-ಕರ್ಮಗಳ ವಿಚಾರ
ಆಯುರ್ವೇದಕ್ಕೆ ಮುಖ್ಯವಲ್ಲ. ಆರೋಗ್ಯ ಕೆಡುವುದು ಇಲ್ಲಿ
ಗಮನಿಸಬೇಕಾದುದು. ಬದುಕಿನಲ್ಲಿ ಒಂದು ರೀತಿ, ನೀತಿ,
ನಿಯಮ, ಗುರಿ ಇದ್ದರೆ ಶರೀರ ಗಟ್ಟಿಯಾಗಿರುತ್ತದೆ; ಮನಸ್ಸು
ನೆಮ್ಮದಿಯಾಗಿರುತ್ತದೆ.

ರೋಗಕ್ಕೆ ಮೂರನೆಯ ಕಾರಣ 'ಕಾಲ' ಅಥವಾ 'ಪರಿ
ಣಾಮ'. ನಮ್ಮ ಅಧೀನವಾಗಿರದೆ ಪ್ರಕೃತಿಯಿಂದಲೇ ಒದಗುವ
ಋತು ವ್ಯತ್ಯಾಸಗಳು, ಹೊರಗಣ ಹವೆಯಲ್ಲಿನ ಅತಿರೇಕಗಳು,
ವಯಸ್ಸಿನಿಂದ ದೇಹದಲ್ಲಿ ಉಂಟಾಗುವ ಮಾರ್ಪಾಡುಗಳು,
ಇವೆಲ್ಲ ಇದರಲ್ಲಿ ಸೇರುತ್ತವೆ.

ವೈದ್ಯರೋರಿಕೊಂಡುಬಂದ ರೋಗವನ್ನು ಪರಿಹರಿಸಿ
ಕೊಳ್ಳಲು ಹೆಣಗಾಡುವುದಕ್ಕಿಂತ ರೋಗ ಬರದಿರುವಂತೆ ಎಚ್ಚರ
ದಿಂದ, ಜಾಣತನದಿಂದ ಬದುಕುವುದು ಆಯುರ್ವೇದದಲ್ಲಿ
ಮುಖ್ಯವೆಂಬ ಮಾತು ಈ ಮೊದಲೇ ಬಂದಿದೆ. ಆರೋಗ್ಯ
ವೆಂದರೆ ರೋಗ ಇಲ್ಲದಿರುವುದಷ್ಟೇ ಅಲ್ಲ, ರೋಗ ಬಂದಡರದಂತೆ
ಶರೀರವನ್ನೂ ಇಂದ್ರಿಯಗಳನ್ನೂ ಮನಸ್ಸನ್ನೂ ಕಾಪಾಡಿ
ಕೊಳ್ಳುವುದು. ಅದನ್ನೇ ಆಯುರ್ವೇದದಲ್ಲಿ 'ಸ್ವಸ್ಥವೃತ್ತ'
ವೆಂದು ಕರೆದಿರುವುದು. ಇದು ನಮ್ಮ ವೈದ್ಯದಲ್ಲಿ ತುಂಬ

ಮುಖ್ಯವಾದ ಭಾಗ. ಬದುಕಿನ ಅಗತ್ಯಗಳೆಲ್ಲವನ್ನೂ ಚೆನ್ನಾಗಿ ವಿಚಾರಮಾಡಿ, ಹೇಗೆ ಬದುಕಿದರೆ ತನಗೂ ತನ್ನ ನೆರೆಯುವರಿಗೂ ಸಮಾಜಕ್ಕೂ ಒಳಿತಾದೀತು ಎಂಬುದನ್ನು ನಿಶ್ಚಯಿಸಿ. ಬದುಕಿನ ಹಲವು ಮೂಲಸೂತ್ರಗಳನ್ನು ಆಯುರ್ವೇದದ ಶಾಸ್ತ್ರಗ್ರಂಥಗಳಲ್ಲಿ ಹಿರಿಯರು ಅಡಕಮಾಡಿದ್ದಾರೆ. ಧರ್ಮ ಶಾಸ್ತ್ರಗಳಲ್ಲಿ ಕಾಣಸಿಗುವ ಹಲವು ನಿಯಮಗಳಿಗೆ ಆರೋಗ್ಯವೇ ಉದ್ದೇಶವಾಗಿರುವುದು.

ಆರೋಗ್ಯದ ಊರುಗೋಲುಗಳು ಮೂರೆಂದು ಚರಕನ ಒಕ್ಕಣೆ. ಅವು ಯಾವುವೆಂದರೆ ಆಹಾರ, ನಿದ್ರೆ, ವ್ಯಾಯಾಮ. ಆಹಾರವಿಲ್ಲದೆ ಯಾವ ಪ್ರಾಣಿಯೂ ಬದುಕಲಾರದು ; ಜೀವವನ್ನು ಉಳಿಸಿಕೊಳ್ಳಲು ಯಾವ ಆಹಾರ ಒಳ್ಳೆಯದು, ಎಷ್ಟು ಆಹಾರ ಅಗತ್ಯ ಎನ್ನುವುದನ್ನು ಮನುಷ್ಯನೊಬ್ಬನನ್ನು ಬಿಟ್ಟು ಉಳಿದ ಎಲ್ಲ ಪ್ರಾಣಿಗಳೂ ಅರಿತಿರುತ್ತವೆ. ಮನುಷ್ಯನಿಗೆ ಮಾತ್ರ ಈ ವಿವೇಕವಿಲ್ಲ ; ಏನನ್ನಾದರೂ ತಿನ್ನುತ್ತಾನೆ, ಎಷ್ಟಾದರೂ ತಿನ್ನುತ್ತಾನೆ; ಯಾವಾಗಲಾದರೂ ತಿನ್ನುತ್ತಾನೆ. ವೈದ್ಯರ ನಡುವೆ ಕಥೆಯೊಂದು ಬಳಕೆಲ್ಲಿದೆ. ಜಗತ್ತಿನ ಜನರ ಆರೋಗ್ಯ ಹೇಗಿದೆಯೆಂದು ಅರಿತುಕೊಳ್ಳುವ ಕುತೂಹಲದಿಂದ ಧನ್ವಂತರಿಯು ಪಕ್ಷಿಯಾಗಿ ಮೈಮರೆಸಿಕೊಂಡು ವೈದ್ಯರ ಬಳಿ ಬಂದು 'ಕೋಽರುಕ್ ? ಕೋಽರುಕ್? ಕೋಽರುಕ್?' ಎಂದು ಮೂರು ಬಾರಿ ಕೂಗಿದನಂತೆ. 'ಕೋಽರುಕ್' (ಕಃಅರುಕ್) ಎಂದರೆ "ಯಾರು ರೋಗವಿಲ್ಲದವನು ?" ಎಂದರ್ಥ. ಇದರ ಇಂಗಿತವನ್ನು ತಿಳಿಯಲಾರದೆ ಉಳಿದ ವೈದ್ಯರೆಲ್ಲರೂ ತಬ್ಬಿಬ್ಬಾದಾಗ ವಾಗ್ಭಟನು, "ಹಿತಭುಕ್, ಮಿತಭುಕ್, ಕ್ಷುತಭುಕ್"

(ಹಿತವಾದುದನ್ನು ಉಣ್ಣುವವನು, ಮಿತವಾಗಿ ಉಣ್ಣುವವ
ಹಸಿದಾಗ ಉಣ್ಣುವವನು) ಎಂದುತ್ತರ ಕೊಟ್ಟನಂತೆ!

ಸಾಮಾನ್ಯವಾಗಿ ನಮ್ಮನ್ನು ಕಾಡುವ ರೋಗಗ
ಆಹಾರದಿಂದಲೇ ಎದ್ದುಕೊಳ್ಳುವಂಥವು. ಪ್ರತಿಯೊಬ್ಬ
ತನ್ನ ಅಗತ್ಯ, ಅಳತೆಗಳನ್ನು ಅರಿತುಕೊಂಡು ಅವನ್ನು ಮಿ
ದಂತೆ ಊಟಮಾಡಿದರೆ ಆರೋಗ್ಯ ಕೆಡುವುದು ಅಪರೂ
ಊಟಮಾಡುವಾಗ ಹೊಟ್ಟೆಯ ಅರ್ಧಭಾಗವನ್ನು ಮಾ
ಆಹಾರದಿಂದ ತುಂಬಿಸಿಕೊಳ್ಳಬೇಕೆಂದೂ, ಉಳಿದರ್ಧದಲ್ಲಿ ಅ
ಭಾಗವನ್ನು (ಎಂದರೆ ಒಟ್ಟಿನಲ್ಲಿ ಕಾಲುಭಾಗವನ್ನು) ನೀರಿನ
ತುಂಬಿಸಿಕೊಳ್ಳಬೇಕೆಂದೂ, ಇನ್ನರ್ಧವನ್ನು (ಎಂದರೆ ಉ
ಕಾಲು ಭಾಗವನ್ನು) ಗಾಳಿಯು ಓಡಾಡಲೆಂದು ಖಾಲಿ
ಬೇಕೆಂದೂ ಹೇಳುತ್ತಾರೆ. ಹೊಟ್ಟೆಯಲ್ಲಿರುವ ಅಗ್ನಿ ಚೆನ್ನಾ
ಉರಿದರೆ ಆರೋಗ್ಯಕ್ಕೂ ಬಲಕ್ಕೂ ಉತ್ಸಾಹಕ್ಕೂ ಕಾ
ವಾಗುತ್ತದೆ. ಕಟ್ಟಿಗೆಯನ್ನು ಎಡೆಬಿಡದೆ ಒಟ್ಟಿಬಿಟ್ಟರೆ ಅ
ಉರಿಯುವುದು ಹೇಗೆ? ಜಾಠರಾಗ್ನಿಯು ಸಮನಾಗಿರ
ಎರಡು ಹೊತ್ತಿನ ಊಟ ಒಳ್ಳೆಯದೆಂದೂ, ನಡುವೆ ಏನನ್
ತಿನ್ನಬಾರದೆಂದೂ ('ನಾಂತರಾಭೋಜನಂ'), ಗೊತ್ತಾ
ಹೊತ್ತನ್ನು ಮೀರಬಾರದೆಂದೂ ('ಕಾಲಭೋಜನಂ') ಉ
ಅನ್ನ ಜೀರ್ಣವಾಗದೆ ಮೇಲೆ ಊಟಮಾಡುವುದು ('ಅಧ್ಯಶ
ತಪ್ಪೆಂದೂ ನಿಯಮಗಳಿವೆ.

ರೋಗ ಬಂದಾಗಲೂ ಆಹಾರವೇ ಔಷಧವಾಗಬಲ್ಲದ
ಊಟಮಾಡುವ ಪದಾರ್ಥ, ಕಾಲ, ಬಗೆಗಳಲ್ಲಿಯೇ ರೋಗವ
ಗುಣಪಡಿಸಿಕೊಳ್ಳಬಹುದು. ಉಳಿದಂತೆ ಔಷಧಿಯನ್ನು ತೆ

ಕೊಳ್ಳುತ್ತಿದ್ದಾಗಲೂ, ಚಿಕಿತ್ಸೆಯನ್ನು ಪಡೆದುಕೊಳ್ಳುತ್ತಿದ್ದಾಗಲೂ, ಆಹಾರ ಮುಖ್ಯವೇ. ಆಯುರ್ವೇದದಲ್ಲಿ 'ಪಥ್ಯ'ದ ಪ್ರಸ್ತಾಪವಿದೆ. ಆ ಮಾತಿಗೆ ಅರ್ಥ 'ನೇರವಾದ ದಾರಿಯಲ್ಲಿ ಇರಿಸುವುದು'. ಶರೀರಕ್ಕೊಂದು ದಾರಿಯಿದೆ; ಆಹಾರ ಸರಿಯಾದರೆ ಆ ದಾರಿ ನೇರವಾಗುತ್ತದೆ. 'ಪಥ್ಯವಿಲ್ಲದೆ ಔಷಧಿಯಿಂದೇನು ? ಪಥ್ಯವಿದ್ದರೆ ಔಷಧಿಯೇಕೆ ?' ಎನ್ನುವ ಚಮತ್ಕಾರದ ಮಾತೊಂದು ಸಂಸ್ಕೃತದಲ್ಲಿದೆ ('ಯದ್ಯಪಥ್ಯಂ ಕಿಮೌಷಧ್ಯಾ ? ಯದಿ ಪಥ್ಯಂ ಕಿಮೌಷಧೈಃ ?'). ಆಹಾರದಂಥ ಔಷಧಿಯೇ ಇಲ್ಲ, ಆಹಾರವಿಲ್ಲದೆ ಔಷಧಿಯೂ ಇಲ್ಲ ಎಂಬುದು ಕಾಶ್ಯಪಸಂಹಿತೆಯ ಮಾತು.

ಶರೀರಕ್ಕೆ ಆಹಾರ ಹೇಗೋ ನಿದ್ರೆಯೂ ಹಾಗೆಯೇ ಎಂದು ಚರಕ ಹೇಳುತ್ತಾನೆ. ಚೆನ್ನಾಗಿ ನಿದ್ರೆಮಾಡಿದರೆ ಶರೀರದ ಆರೋಗ್ಯ, ಮನಸ್ಸಿನ ನೆಮ್ಮದಿ. ರೋಗ ಇದ್ದಾಗಲೂ ನಿದ್ರೆ ಬಂದರೆ 'ಅರ್ಧರೋಗಹರೀ' ಎಂದು ಹೇಳುತ್ತಾರೆ. ಸೂರ್ಯನ ಅಡ್ಡಾಟವನ್ನು ಅನುಸರಿಸಿ ಮನುಷ್ಯನ ದೇಹವೂ ರಾತ್ರಿಯ ವೇಳೆ ನಿದ್ರೆಯಲ್ಲಿರಬೇಕು. ಹಗಲು ನಿದ್ರೆ ಮಾಡುವುದಾಗಲೀ, ರಾತ್ರಿ ನಿದ್ರೆಕೆಡುವುದಾಗಲೀ ಒಳ್ಳೆಯದಲ್ಲ. ಹೆಚ್ಚಾಗಿ ನಿದ್ರೆ ಮಾಡುವುದೂ ಸರಿಯಲ್ಲ. ರಾತ್ರಿಯನ್ನು ಮೂರು ಯಾಮಗಳಾಗಿ ವಿಂಗಡಿಸಿ ಸೂರ್ಯ ಹುಟ್ಟುವ ಮೊದಲು, ಸೂರ್ಯ ಮುಳುಗಿದ ಮೇಲೆ ಎರಡೂ ಯಾಮಗಳನ್ನು ಬಿಟ್ಟು ನಡುವಣ ಯಾಮದಲ್ಲಿ (ಎಂದರೆ ಸುಮಾರು ರಾತ್ರಿ ಹತ್ತುಗಂಟೆಯಿಂದ ಮುಂಜಾನೆ ನಾಲ್ಕುಗಂಟೆಯವರೆಗೆ) ನಿದ್ರೆ ಮಾಡಬೇಕೆಂದು ವಿಧಿಯಿದೆ. ಈ ಕಾಲವನ್ನೇ 'ಮಹಾನಿಶಾ' ಎಂದು ಕರೆದು

ಉದ 'ಹಿತಕಾರಿ'ಯೆಂದೂ 'ಸರ್ವೋತ್ತಮ'ವೆಂದೂ ಬಣ್ಣಿಸ
ತ್ತಾರೆ.

ನಿದ್ರೆಯಲ್ಲಿ ಹಲವು ಬಗೆಗಳಿವೆ. ಮನಸ್ಸಿನಲ್ಲಿ ತಮೋಗುಣ
ಹೆಚ್ಚಾಗಿ, ಬರುವ ನಿದ್ರೆ ಸಾಮಾನ್ಯವಾದ ನಿದ್ರೆ ('ತಮೋ
ಭವಾ'); ಕಫ ಹೆಚ್ಚಾಗಿ ಬರುವ ನಿದ್ರೆ ('ಕಫಸಂಭವಾ'
ಆಯಾಸ ಹೆಚ್ಚಾಗಿ ಬರುವ ನಿದ್ರೆ ('ಶ್ರಮಸಂಭವಾ'), ಮಾ
ಕದ್ರವ್ಯಗಳಿಂದ ಬರುವ ನಿದ್ರೆ ('ಆಗಂತುಕೀ'), ಮತ್ತು ರೋ
ದಿಂದಾಗಿ ಬರುವ ನಿದ್ರೆ ('ವ್ಯಾಧ್ಯನುವರ್ತಿನೀ'). ಇವೆಲ್ಲವ
ದೇಹಕ್ಕೆ ಅಥವಾ ಮನಸ್ಸಿಗೆ ಒಳ್ಳೆಯದಲ್ಲ. ರಾತ್ರಿಯ ಸ್ವಭಾ
ವನ್ನನುಸರಿಸಿ ಮನಸ್ಸಿನ ತಮೋಗುಣವು ಹೆಚ್ಚಿದಾಗ ಬರು
ನಿದ್ರೆಯೇ ಅಗತ್ಯವಾದುದು, ಹಿತವಾದುದು. ಅದನ್ನೇ 'ಸು
ನಿದ್ರೆ'ಯೆನ್ನುವರು. ನಿದ್ರೆಯ ವಿಚಾರವಾಗಿ ಆಯುರ್ವೇ
ಗ್ರಂಥಗಳಲ್ಲಿ ಸ್ವಾರಸ್ಯವಾದ ವಿವರಗಳಿವೆ.

ಆರೋಗ್ಯದ ಮೂರನೆಯ ಊರುಗೋಲು ವ್ಯಾಯಾಮ
ಶಾಸ್ತ್ರಗ್ರಂಥಗಳಲ್ಲಿ ಬ್ರಹ್ಮಚರ್ಯವೆಂದು ಕರೆದಿರುವುದು ಇದನ್ನೆ
ಎನ್ನಬಹುದು. ಬ್ರಹ್ಮಚರ್ಯವೆಂದರೆ ಸಾಮಾನ್ಯವಾ
ಅರ್ಥ ವೀರ್ಯರಕ್ಷಣೆ; ಶುಕ್ರಧಾತುವನ್ನು ಕಾಪಾಡಿಕೊಳ
ವುದು; ಕಾಮಪ್ರವೃತ್ತಿಗಳನ್ನು ಬಿಗಿಹಿಡಿದು ಸಂಯಮ
ದಿಂದಿರುವುದು; ಗಂಡಸು ಹೆಂಗಸಿನ ಸಂಪರ್ಕವನ್ನೂ, ಹೆಂಗ
ಗಂಡಸಿನ ಸಂಪರ್ಕವನ್ನೂ ಬಿಡುವುದು. ಆದರೆ ಆಯುರ್ವೇ
ದಲ್ಲಿ ಕಾಮಪ್ರವೃತ್ತಿ, ಮೈಥುನಗಳನ್ನು ಸಹಜವಾದುವೆಂ
ಪರಿಗಣಿಸಿ, ಅದನ್ನು ಪೂರ್ಣವಾಗಿ ಬಿಡಬಾರದೆಂಬ ನಿಯಮ
ವಿದೆ. ಕಾಲಕಾಲಕ್ಕೆ, ಕ್ರಮವರಿತು ಲೈಂಗಿಕತೃಪ್ತಿ ದೊರೆ

ದಿದ್ದರೆ ಆರೋಗ್ಯಕ್ಕೆ ಅಡಚಣೆಯುಂಟೆಂದೂ ಹೇಳಲಾಗಿದೆ. ಆದುದರಿಂದ ಬ್ರಹ್ಮಚರ್ಯವೆನ್ನುವ ಮಾತನ್ನು 'ಸ್ಥೈರ್ಯವನ್ನುಂಟುಮಾಡುವ ಸಾಧನ' ಎನ್ನುವ ಅರ್ಥದಲ್ಲಿ ಗ್ರಹಿಸಬೇಕು.

'ವ್ಯಾಯಾಮಃ ಸ್ಥೈರ್ಯಕರಣಂ' ಎಂದು ಚರಕನ ಒಕ್ಕಣೆ. ಶರೀರದ ಬೇರೆಬೇರೆ ಅಂಗಗಳನ್ನು ಕ್ರಮಬದ್ಧವಾಗಿ ಎಳೆದು, ಬಗ್ಗಿಸಿ ಶರೀರಕ್ಕೆ ಆಯಾಸವನ್ನುಂಟುಮಾಡುವುದು ವ್ಯಾಯಾಮ. 'ಶರೀರಾಯಾಸಜನಕಂ ಕರ್ಮ' (ಶರೀರವನ್ನು ದಣಿಸುವ ಕೆಲಸ) ಎಂದು ಸುಶ್ರುತನು ವಿವರಿಸಿದ್ದಾನೆ. ಆದರೆ 'ಅತಿವ್ಯಾಯಾಮ'ದಿಂದ ಒದಗುವ ತೊಂದರೆಗಳನ್ನೂ ಪಟ್ಟಿ ಮಾಡಿ ಎಚ್ಚರಿಸಿದ್ದಾನೆ. ಶರೀರ ಗಟ್ಟಿಯಾಗುವುದು ವ್ಯಾಯಾಮದ ಮುಖ್ಯ ಉದ್ದೇಶ. ಶರೀರದಲ್ಲಿರುವ ಅಗ್ನಿ ಸಮನಾಗಿರುವಂತೆ ಮಾಡುವುದು ಇದರ ಒಂದು ವಿವರ, ಧಾತುಗಳನ್ನು ಪುಷ್ಟಿಗೊಳಿಸುವುದು ಇನ್ನೊಂದು, ಮಲಗಳು ದೇಹದಿಂದ ಹೊರಗೆ ಹೋಗಲು ನೆರವಾಗುವುದು ಮತ್ತೊಂದು. ಆದರೆ ಪ್ರತಿಯೊಬ್ಬನೂ ತನ್ನ ಬಲವನ್ನು ನೋಡಿಕೊಂಡು, ಅದರ ಅರ್ಧದಷ್ಟು ಮಾತ್ರವೇ ವ್ಯಾಯಾಮ ಮಾಡಬೇಕೆಂದು ಆಯುರ್ವೇದ ಸೂಚಿಸುತ್ತದೆ.

ಹೀಗೆ ಆಹಾರ, ನಿದ್ರೆ, ವ್ಯಾಯಾಮಗಳಿಂದ ಶರೀರದ ಮೂರು ದೋಷಗಳು ಸಮನಾಗಿರುವಂತೆ, ಶರೀರದ ಅಗ್ನಿಯು ಒಂದೇ ತೆರನಾಗಿರುವಂತೆ, ಧಾತುಗಳೂ ಮಲಗಳೂ ಏರುಪೇರಿಲ್ಲದೆ ಕೆಲಸ ಮಾಡುವಂತಾಗಿ ಇಂದ್ರಿಯಗಳೂ ಮನಸ್ಸೂ ನೆಮ್ಮದಿಯಿಂದ ಇರುವಂತಾದರೆ ಅದೇ ಆರೋಗ್ಯ. ಶಾಸ್ತ್ರಗ್ರಂಥ

ಗಳಲ್ಲಿ ಇದನ್ನೇ 'ಸ್ವಸ್ಥ' ಎಂದು ಕರೆದಿರುವುದು. ಎಲ್ಲ
ಆಯುರ್ವೇದ ವಿದ್ಯಾರ್ಥಿಗಳಿಗೂ ಪರಿಚಿತವಾದ ಈ ಶ್ಲೋಕ
ಸೊಗಸಾಗಿದೆ–

ಸಮದೋಷಃ ಸಮಾಗ್ನಿಶ್ಚ
ಸಮಧಾತು - ಮಲಕ್ರಿಯಾಃ ।
ಪ್ರಸನ್ನಾತ್ಮೇಂದ್ರಿಯಮನಾಃ
ಸ್ವಸ್ಥ ಇತ್ಯಭಿಧೀಯತೇ ॥

# ೦. ಚಿಕಿತ್ಸೆಯ ನಾಲ್ಕು ಪಾದಗಳು

ಆಯುರ್ವೇದ ಗ್ರಂಥಗಳಲ್ಲಿ ಚಿಕಿತ್ಸೆಯು ನಾಲ್ಕು ಕಾಲುಗಳ ಮೇಲೆ ನಿಂತು ಸಾಗುವುದೆಂದು ಹೇಳಿದೆ. ವೈದ್ಯ (ಭಿಷಕ್), ಔಷಧಿ(ದ್ರವ್ಯ), ಪರಿಚಾರಕ(ಉಪಸ್ಥಾಪಿಕಾ)ಮತ್ತು ರೋಗಿ ಇವು ಚಿಕಿತ್ಸೆಯ 'ಪಾದಚತುಷ್ಟಯ'. ಇವೆಲ್ಲ ಪರಸ್ಪರ ಅನುಕೂಲವಾಗಿದ್ದು ನೆರವಾದರೇ ಚಿಕಿತ್ಸೆ ಸಾರ್ಥಕವಾಗುವುದು. ಒಂದೊಂದು ಕಾಲೂ ಊನವಿಲ್ಲದೆ, ಸಮನಾಗಿದ್ದು, ಸಮರ್ಥವಾಗಿರಬೇಕು. ದೋಷಗಳು ಸಮನಾಗುವುದು ಚಿಕಿತ್ಸೆಯಾದರೆ ಈ ಪಾದಗಳೂ ಸಮನಾಗಿರಬೇಕು.

ವೈದ್ಯನು ಹೇಗಿರಬೇಕೆಂಬ ಒಕ್ಕಣೆ ಎಲ್ಲ ಹಳೆಯ ಸಂಹಿತೆಗಳಲ್ಲೂ ಬರುತ್ತದೆ. ಸಾಮಾನ್ಯವಾಗಿ ನಾಲ್ಕು ಪ್ರಧಾನ ಲಕ್ಷಣಗಳನ್ನು ಉತ್ತಮನಾದ ವೈದ್ಯನಿಗೆ ಹೇಳುತ್ತಾರೆ–'ದಕ್ಷಃ ತೀರ್ಥಾತ್ತ ಶಾಸ್ತ್ರಾರ್ಥಃ ದೃಷ್ಟಕರ್ಮಾ ಶುಚಿರ್ಭಿಷಕ್'. ಅವನು ದಕ್ಷನಾಗಿರಬೇಕು ; ಎಂದರೆ ಬುದ್ಧಿವಂತನಾರಬೇಕು, ದೃಢಕಾಯನಾಗಿರಬೇಕು, ಇಂದ್ರಿಯಪಾಟವ ಚೆನ್ನಾಗಿರಬೇಕು ; ಔಷಧಿಗಳನ್ನು ತಾನೇ ಸಿದ್ಧಪಡಿಸುವ, ಅಗತ್ಯಬಿದ್ದರೆ ಶಸ್ತ್ರಕರ್ಮಮಾಡುವ ಶಕ್ತಿಯಿರಬೇಕು. ಎರಡನೆಯ ಗುಣ. ಸರಿಯಾದ ಗುರುವಿನ ಬಳಿ ಶಾಸ್ತ್ರಗಳನ್ನು ಕಲಿತು ಅದರ ರಹಸ್ಯವನ್ನೆಲ್ಲ ತಿಳಿದಿರಬೇಕು. ಶಾಸ್ತ್ರಜ್ಞಾನವಿಲ್ಲದ ವೈದ್ಯ ಯಮನ ಸೋದರನೆಂಬ ಮಾತಿದೆ! ವೈದ್ಯಶಾಸ್ತ್ರವೊಂದನ್ನೇ

ಕಲಿತರೆ ಸಾಲದೆಂದೂ, ಚಿಕಿತ್ಸಕನು ಬಹುಶ್ರುತನಾಗಿದ್ದು ಅನ
ಶಾಸ್ತ್ರಗಳನ್ನು ತಿಳಿದಿರಬೇಕೆಂದೂ ಹಾಗಾದರೇ ವೈದ್ಯ ಶಾಸ್ತ್
ನಿಶ್ಚಯವಾಗುವುದೆಂದೂ ಸುಶ್ರುತನು ಎಚ್ಚರಿಸುತ್ತಾ
ವೈದ್ಯವು ಪ್ರಾಯೋಗಿಕವಾದ ವಿದ್ಯೆಯಾದುದರಿಂದ, ಅದೊಂ
ಕಲೆಯಾದುದರಿಂದ ವೈದ್ಯನಾಗುವವನು ಸಮರ್ಥನಾದ ಗು
ವಿನ ಬಳಿ ಉಳಿದುಕೊಂಡು ಅವನು ರೋಗಿಗಳನ್ನು ಪರಿ
ಮಾಡುವ ಬಗೆ, ಚಿಕಿತ್ಸೆಗಳನ್ನು ಮಾಡುವ ರೀತಿ, ಜನರ
ನಡೆದುಕೊಳ್ಳುವ ವಿಧಾನ ಎಲ್ಲವನ್ನೂ ನೋಡಿ ಕಲಿಯಬೇಕ
ಇದನ್ನೇ 'ಕರ್ಮಾಭ್ಯಾಸ'ವೆನ್ನುತ್ತಾರೆ. ಪಕ್ಷಿಯ ಎರ
ರೆಕ್ಕೆಗಳಿದ್ದಂತೆ, ರಥದ ಎರಡು ಚಕ್ರಗಳಿದ್ದಂತೆ ವೈದ್ಯ
ಶಾಸ್ತ್ರಜ್ಞಾನ ಮತ್ತು ಕರ್ಮಾಭ್ಯಾಸ. ಕಡೆಯದಾಗಿ,
ಮನಸ್ಸು ಮಾತು ಮೂರರಲ್ಲೂ ಅವನು ಶುಚಿಯಾಗಿರಬೇಕ

ವೈದ್ಯನಿಗೆ ಹಣದಾಸೆ ಯಾವ ಕಾಲದಲ್ಲಿಯೂ ಇದ್ದಿ
ಇರಬಾರದೆಂಬ ಶಾಸ್ತ್ರವಿಧಿಯೂ ಎಂದಿನಿಂದಲೂ ಇದೆ! ಅ
ಹಳೆಯಕಾಲದಲ್ಲಿ, ರೋಗಿಯು ಗುಣಹೊಂದಿ ಮೊಟ್ಟಮೊ
ಲಾಗಿ ಸಾಮಾನ್ಯವಾದ ಆಹಾರವನ್ನು ತೆಗೆದುಕೊಂಡ ದಿನ
ವೈದ್ಯನಿಗೆ ಸಂಭಾವನೆ ಸಿಗುತ್ತಿದ್ದುದು. ರೋಗವ
ಹೋಗಲಾಡಿಸದೆ ಹಣವನ್ನು ಪಡೆಯಬಾರದೆಂಬ ನಿಯಮವ
ಶಾಸ್ತ್ರಗ್ರಂಥಗಳಲ್ಲಿ ಮತ್ತೆ ಮತ್ತೆ ಕಾಣುತ್ತೇವೆ. ಅ
ಹಣವಂತರು ತಾವಾಗಿ ಕೊಟ್ಟಷ್ಟನ್ನು ವೈದ್ಯನು ತೆಗೆ
ಕೊಳ್ಳಬೇಕೆಂದೂ ಬಡವರಿಂದ ಏನನ್ನೂ ಪಡೆಯಬಾರದೆಂ
ಕಟ್ಟು ಇದೆ. ಚಿಕಿತ್ಸೆಯ ಅಗತ್ಯವಿಲ್ಲದಿದ್ದರೂ ಹಣದ
ಯಿಂದ ಚಿಕಿತ್ಸೆಮಾಡುವುದು ಪಾಪವೆಂದೂ, ಮೊದಲಲ್ಲಿ ಬರ

ಆಹಾರದಿಂದಲೇ ಗುಣಪಡಿಸಲು ಯತ್ನಿಸಬೇಕೆಂದೂ, ವಿಧಿಯಿಲ್ಲ ದಿದ್ದರೆ ಔಷಧಿಗಳನ್ನು ಬಳಸಬೇಕೆಂದೂ, ಅದರಿಂದಲೂ ರೋಗ ವಾಸಿಯಾಗದಿದ್ದರೆ ಶಸ್ತ್ರಚಿಕಿತ್ಸೆ ಮಾಡಬೇಕೆಂದೂ ಶಾಸ್ತ್ರ ಗ್ರಂಥಗಳು ಹೇಳುತ್ತವೆ. ಇವೆಲ್ಲ 'ಶುಚಿ'ಯೆನ್ನುವ ಲಕ್ಷಣದಲ್ಲಿ ಸೇರುವ ವಿವರಗಳು.

ಚಿಕಿತ್ಸೆಯ ಎರಡನೆಯ 'ಪಾದ' ಔಷಧಿ. ವೈದ್ಯನು ಯಾವ ದ್ರವ್ಯವನ್ನು ಬಳಸಿ ರೋಗವನ್ನು ಗುಣಪಡಿಸುವನೋ ಅದೇ ಔಷಧಿ; ಎಂದರೆ ಯಾವುದರಲ್ಲಿ ಆರೋಗ್ಯವನ್ನು ಮತ್ತೆ ಒದಗಿಸುವ ರಸ (ಓಷ) ವಿರುವುದೋ ಅದು. ಈ ಗುಣವನ್ನು 'ಬಹುಕಲ್ಪಂ ಬಹುಗುಣಂ ಸಂಪನ್ನಂ ಯೋಗ್ಯಂ' ಎಂದು ವಿವರಿಸುತ್ತಾರೆ. ಒಂದೇ ರೋಗಕ್ಕೆ ಹಲವಾರು ಔಷಧಿಗಳಿರುತ್ತವೆ; ಒಂದೇ ಔಷಧಿಗೆ ಹಲವಾರು ರೋಗ ಗಳನ್ನು ಹೋಗಲಾಡಿಸುವ ಶಕ್ತಿಯೂ ಇರುತ್ತದೆ. ಯಾವ ದ್ರವ್ಯವನ್ನು ಯಾವ ರೀತಿಯಲ್ಲಿ ಸಿದ್ಧಪಡಿಸಬೇಕೆನ್ನುವುದು ಮುಖ್ಯವಾದ ವಿಚಾರ. ಇದನ್ನೇ ಕಲ್ಪವೆನ್ನುವುದು.

ಹೀಗೆ ಸಿದ್ಧಪಡಿಸುವಾಗ ಹೊಸ ಹೊಸ ಗುಣಗಳೂ ಬಂದು ಕೂಡಿಕೊಳ್ಳುತ್ತವೆ. ಕೆಲವರು ವೈದ್ಯರು ಒಂದೇ ಮೂಲಿಕೆಯಿಂದ ಹಲವು ರೋಗಗಳನ್ನು ಗುಣಪಡಿಸುವ ವಾಡಿಕೆ ಮೊನ್ನೆ ಮೊನ್ನೆಯವರೆಗೂ ಇದ್ದಿತು. 'ಏಕಮೂಲಿಕಾ ಪ್ರಯೋಗ'ವೆಂಬ ಮಾತು ಇಂದಿಗೂ ರೂಢಿಯಲ್ಲಿದೆಯಲ್ಲದೆ ? ಮೂಲಿಕೆಯೊಂದೇ ಆದರೂ ಅನೇಕ ಬಗೆಗಳಲ್ಲಿ ಅದನ್ನು ಮಾರ್ಪಡಿಸಿ, ಸಂಸ್ಕರಿಸಿ ವೈದ್ಯನು ರೋಗಿಗೆ ಕೊಡುತ್ತಿದ್ದನು. ರೋಗಕ್ಕೆ ತಕ್ಕಂತೆ 'ಕಲ್ಪ'ವೂ ಗುಣವೂ ಇರಬೇಕು; ರೋಗಿಯು

ಅದನ್ನು ಉಂಡು ಅರಗಿಸಿಕೊಳ್ಳುವಂತಿರಬೇಕು. ಆಗಲೇ ವೈದ್ಯನು ಕೊಟ್ಟಿದ್ದು 'ಸಂಪನ್ನ'ವಾಗುವುದು, 'ಯೋಗ್ಯ' ವಾಗುವುದು. ಔಷಧಿ ಹೀಗಿದ್ದರೇ ಚಿಕಿತ್ಸೆ ಸಾರ್ಥಕವಾಗು ವುದು.

ವಿಷ, ಆಯುಧ, ಬೆಂಕಿಗಳಂತೆ, ಔಷಧಿಯನ್ನೂ ತಿಳಿದು ಬಳಸಿದರೆ ಹಿತ; ತಿಳಿಯದೆ ಬಳಸಿದರೆ ಅಪಾಯ ಎಂದು ಹೇಳುವ ಶ್ಲೋಕವೊಂದಿದೆ. ಔಷಧಿಯ ತಯಾರಿಕೆ ('ಯೋಗ') ಸರಿಯಾಗಿರದಿದ್ದರೆ, ಅಥವಾ ಅರಿಯದೆ ಬಳಸಿದರೆ ಅದು ವಿಷವಾದೀತು. ವಿಷವನ್ನು ಸರಿಯಾಗಿ ಸಿದ್ಧಪಡಿಸಿ, ಅರಿತು ಬಳಸಿದರೆ ಔಷಧಿಯಾಗಬಲ್ಲುದು! ವೈದ್ಯನ ಜಾಣತನ, ತಿಳುವಳಿಕೆ, ಅನುಭವ ಇಲ್ಲಿ ಕೆಲಸಕ್ಕೆ ಬರುತ್ತವೆ. ಅವನು ಔಷಧಿಯನ್ನು ಕತಕವಂತೆ ಪ್ರಯೋಗಿಸಬೇಕೆಂದು ಹಿತವಚನ ವೊಂದಿದೆ. ಕತಕವೆಂದರೆ ಕೊಳೆಯಾಗಿರುವ ನೀರನ್ನು ತಿಳಿಮಾಡಿ ಕೊಳೆಯನ್ನು ಕೆಳಗುಳಿಸಿ, ಅದರೊಂದಿಗೆ ತಾನೂ ಮರೆಯಾಗುವ ಅಪುರೂಪವಾದ ಪದಾರ್ಥ. ಔಷಧಿಯು ರೋಗವನ್ನು ಹೋಗ ಲಾಡಿಸಿ ಅದರೊಂದಿಗೆ ತಾನೂ ಮರೆಯಾಗಬೇಕು; ದೇಹದಲ್ಲಿ ಬೇರೆಯಾಗಿ ಉಳಿಯಬಾರದು.

ಮೂರನೆಯ 'ಪಾದ' ಪರಿಚಾರಕ; ಇಂದಿನ ಪರಿಭಾಷೆ ಯಲ್ಲಿ ನರ್ಸ್. ಇವನನ್ನು 'ಅನುರಕ್ತಃ ಶುಚಿರ್ದಕ್ಷೋ ಬುದ್ಧಿ ಮಾನ್' ಎಂದು ವಿವರಿಸುತ್ತಾರೆ. ವೈದ್ಯನಿಗಿರಬೇಕಾದ ಶುಚಿ, ದಕ್ಷತೆ, ಬುದ್ಧಿವಂತಿಕೆಗಳನ್ನು ಇವನಿಗೂ ಹೇಳಿದ್ದಾರೆ. ಆದರೆ ವೈದ್ಯನಿಗೆ ಬೆಂಬಲವಾಗಿ ಶಾಸ್ತ್ರಜ್ಞಾನವಿರುವಂತೆ ಪರಿಚಾರಕನಿಗೆ ಅನುಭವವಿರಬೇಕು, ಅನುರಕ್ತಿಯಿರಬೇಕು. ತನ್ನ ಕರ್ತವ್ಯ

ದಲ್ಲಿ ಆಸ್ಥೆ, ರೋಗಿಯು ಗುಣವಾಗಲೆಂಬ ತವಕ, ವೈದ್ಯನಲ್ಲಿ ವಿಶ್ವಾಸ, ವೈದ್ಯನು ನಡೆಸಿದ ಚಿಕಿತ್ಸೆಯನ್ನು ಕಂಡು, ಪಡೆದು ಕೊಂಡ ತಿಳುವಳಿಕೆ ಇವೆಲ್ಲ ಪರಿಚಾರಕನ ಗುಣಗಳಲ್ಲಿ ಸೇರುತ್ತವೆ.

ವೈದ್ಯನೂ ಪರಿಚಾರಕನೂ ಚಿಕಿತ್ಸೆಯಲ್ಲಿ ನೇರವಾಗಿ ಪಾಲ್ಗೊಳ್ಳುವವರು. ಇವರು ಹಣದ ಮೇಲಿನ ಆಸೆಯನ್ನು ಬಿಟ್ಟು ಧರ್ಮಬುದ್ಧಿಯಿಂದ ತಮ್ಮ ಹೊಣೆಯನ್ನು ಹೊರ ಬೇಕೆಂದು ಶಾಸ್ತ್ರಗ್ರಂಥಗಳು ಹೇಳುತ್ತವೆ. ಸಾಮಾನ್ಯವಾಗಿ ಬಳಕೆಯಲ್ಲಿರುವ ಶ್ಲೋಕವೊಂದು, ಇವರು ಮಾಡಿದ ಚಿಕಿತ್ಸೆ ಯೆಂದೂ ಉಪಯೋಗವಿಲ್ಲದೆ ಹೋಗುವುದಿಲ್ಲ ಎನ್ನುತ್ತದೆ. ಅದಕ್ಕೆ ಕಾರಣಗಳನ್ನು ಹೀಗೆ ಹೇಳಿದೆ. ಕೆಲವೊಮ್ಮೆ ಚಿಕಿತ್ಸೆ ಯಿಂದ ಧರ್ಮ ಒದಗುತ್ತದೆ; ಕೆಲವೊಮ್ಮೆ ಹಣವೂ ದೊರೆಯ ಬಹುದು. ಧರ್ಮವಾಗಲೀ ಹಣವಾಗಲೀ ಬಾರದೇ ಹೋದರೂ ಸರಿಯಾಗಿ ಚಿಕಿತ್ಸೆ ಮಾಡಿದರೆ ರೋಗಿಯು ಸ್ನೇಹ ವನ್ನು ಪಡೆದುಕೊಂಡಂತಾದೀತು. ಅದೂ ಇಲ್ಲವೆಂದರೆ ಕೆಲ ವೊಮ್ಮೆ ವೈದ್ಯನಿಗೆ ಒಳ್ಳೆಯ ಹೆಸರಾದರೂ ಬಂದೀತು. ಇವು ಯಾವುವೂ ಇಲ್ಲವೆಂದರೆ, ವೈದ್ಯನಿಗೆ ಚಿಕಿತ್ಸೆಮಾಡುವಲ್ಲಿ ಅನು ಭವವಾದರೂ ಬಂದಂತಾಗುವುದಿಲ್ಲವೆ ?

> ಕ್ವಚಿದ್ಧರ್ಮಃ ಕ್ವಚಿನ್ಮೈತ್ರೀ
> ಕ್ವಚಿದರ್ಥಃ ಕ್ವಚಿದ್ಯಶಃ ।
> ಕರ್ಮಾಭ್ಯಾಸಃ ಕ್ವಚಿಚ್ಚೇತಿ
> ಚಿಕಿತ್ಸಾ ನಾಸ್ತಿ ನಿಷ್ಫಲಾ ॥

ಇನ್ನು ಕಡೆಯ 'ಪಾದ' ರೋಗಿಯೇ. ಇವನು ಹೇಗಿರ ಬೇಕೆಂದರೆ "ಆಢ್ಯಃ ಭಿಷಗ್ವಶಃ ಜ್ಞಾಪಕಃ ಸತ್ಯವಾನ್' ಎಂದು

ವಿವರಗಳಿವೆ. ಆಢ್ಯನೆಂದರೆ ಸಾಮಾನ್ಯವಾದ ಅರ್ಥ ಹಣವಂತನೆಂದು. ರೋಗಿಯು ಹಣವಂತನಾಗಿದ್ದರೇನೋ ವೈದ್ಯನಿಗೆ ಅನುಕೂಲವೇ. ಆದರೆ ಬಡವರಿಗೆ ರೋಗ ಬರಬಾರದೆಂಬ ನಿಯಮವೇನು ಇಲ್ಲವಲ್ಲ ? ಬಡವನನ್ನು ವೈದ್ಯ ಗುಣಪಡಿಸಲೆತ್ನಿಸಬಾರದೆಂದೂ ಈ ವಿವರಣೆಯ ತಾತ್ಪರ್ಯವಲ್ಲ. ಆಢ್ಯನೆಂದರೆ ಯುಕ್ತ, ಅಭಿಜನ, ಒಳ್ಳೆಯ ಮನೆತನವಿದ್ದು ಸರಿಯಾಗಿ ಬಾಳನ್ನು ನಡೆಸುವವನೆಂದರ್ಥ. ನಡತೆ ಕೆಟ್ಟದಾಗಿದ್ದು, ಚಪಲಗಳು ಹೆಚ್ಚಾಗಿದ್ದರೆ ಯಾವ ಔಷಧಿ ತಾನೆ ಕೆಲಸ ಮಾಡೀತು ? ಪಥ್ಯವಿಲ್ಲದೆ ಔಷಧಿಯು ಬಲವಿರದು ; ಹಿಡಿದ ದಾರಿ ಸರಿಯಾಗಿರದೆ ಪಥ್ಯವಿರದು.

ರೋಗಿಯು ವೈದ್ಯನಿಗೆ ತಗ್ಗಿ, ಬಗ್ಗಿ ನಡೆದುಕೊಳ್ಳಬೇಕು. ವೈದ್ಯನಲ್ಲಿವಿಶ್ವಾಸವಿಲ್ಲದೆ, ಅವನ ಶಕ್ತಿಯಲ್ಲಿ ನಂಬಿಕೆಯಿಲ್ಲದೆ, ಅವನು ಹೇಳಿದ್ದನ್ನು ಮಾಡುವ ವಿನಯವಿಲ್ಲದೆ ಹೋದರೆ ಅವನು ಸರಿಯಾದ ರೋಗಿಯಲ್ಲ ; ವೈದ್ಯನಿಂದ ಅವನಿಗೇನೂ ಪ್ರಯೋಜನವಾಗದು. ವೈದ್ಯನ ಬಗ್ಗೆ ಗೌರವವಿರಬೇಕು, ಔಷಧಿಯ ಬಗ್ಗೆ ಆದರವಿರಬೇಕು. ಮತ್ತೆ, ಚಿಕಿತ್ಸೆಯಾದೊಡನೆ ವೈದ್ಯನನ್ನು ಮರೆಯುವಂಥ ರೋಗಿಗೆ ವೈದ್ಯನ ಅಗತ್ಯ ಮತ್ತೆ ಮತ್ತೆ ಬರುತ್ತದೆ ! ವೈದ್ಯನನ್ನು ಮರೆಯುವುದರ ಜೊತೆಗೆ ಚಿಕಿತ್ಸೆಯ ಇಂಗಿತವನ್ನೂ ಮರೆಯುತ್ತಾನೆ ; ರೋಗ ತನ್ನನ್ನು ಕಾಡಿದ ಕಾರಣಗಳನ್ನೂ ಮರೆಯುತ್ತಾನೆ. ವೈದ್ಯನು ಬರಿಯ ಚಿಕಿತ್ಸಕನಲ್ಲ, ಗುರುವೂ ಹೌದು ; ರೋಗದಿಂದ ತನ್ನನ್ನು ಪಾರುಮಾಡಿದುದಲ್ಲದೆ ಆರೋಗ್ಯವಾಗಿರುವುದು ಹೇಗೆಂಬ ಪಾಠವನ್ನೂ ಕಲಿಸಿದವನು. ಈ ದೃಷ್ಟಿಯು ರೋಗಿಗಿರಬೇಕು.

ಮತ್ತು ರೋಗಿಯು ತನ್ನ ರೋಗಕ್ಕೆ ಸಂಬಂಧಪಟ್ಟ ಯಾವುದೇ ವಿವರವನ್ನಾಗಲೀ ವೈದ್ಯನಿಂದ ಮರೆಮಾಚ ಬಾರದು. ರೋಗದ ಸಂಪೂರ್ಣವಾದ ಚಿತ್ರ ವೈದ್ಯನ ಅರಿವಿಗೆ ಬಾರದಿದ್ದರೆ ಅವನು ಚಿಕಿತ್ಸೆಯನ್ನು ನಿರ್ಧರಿಸುವುದು ಹೇಗೆ? 'ಸಂಸಾರ ಗುಟ್ಟು, ವ್ಯಾಧಿ ರಟ್ಟು' ಎಂಬ ನಾಣ್ನುಡಿಯೇ ಇದೆಯಲ್ಲವೆ? ವೈದ್ಯನೆದುರು ಆಡಿದ ಸಟೆ ರೋಗಿಗೆಂದೂ ಹಿತವಾಗಲಾರದು. ಇದು 'ಸತ್ಯವಾನ್' ಎಂಬ ವಿವರದ ಅರ್ಥ.

ಹೀಗೆ ವೈದ್ಯ, ಔಷಧಿ, ಪರಿಚಾರಕ, ರೋಗಿ ಇವುಗಳನ್ನು ಚಿಕಿತ್ಸೆಯ 'ಚತುಷ್ಪಾದ'ಗಳು (ನಾಲ್ಕು ಕಾಲುಗಳು) ಎಂದು ಕರೆಯುತ್ತಾರೆ. ಪೀಠದ ನಾಲ್ಕು ಕಾಲುಗಳಿದ್ದಂತೆ, ಮಂಚದ ನಾಲ್ಕು ಕಾಲುಗಳಿದ್ದಂತೆ ಚಿಕಿತ್ಸೆಗೂ ನಾಲ್ಕು ಕಾಲುಗಳು. ನಾಲ್ಕೂ ಕಾಲುಗಳು ಸಮನಾಗಿ, ಬಲವಾಗಿದ್ದರೆ ಪೀಠವಾಗಲೀ ಮಂಚವಾಗಲೀ ಹೇಗೆ ಸುಭದ್ರವೋ ಹಾಗೆಯೇ ಈ ನಾಲ್ಕು 'ಪಾದ'ಗಳೂ ಸರಿಯಾಗಿದ್ದರೆ ಚಿಕಿತ್ಸೆ ಫಲಕಾರಿಯಾದೀತು.

ಚರಕಸಂಹಿತೆಯಲ್ಲಿ ಸ್ವಾರಸ್ಯವಾದ ಚರ್ಚೆಯೊಂದು ಬರುತ್ತದೆ. ಮೈತ್ರೇಯನೆಂಬುವನು ಹೇಳುತ್ತಾನೆ–ರೋಗಿಯು ಅನುಕೂಲನಾಗಿದ್ದು ಒಳ್ಳೆಯ ವೈದ್ಯನೂ ದೊರೆತು ಪರಿಚಾರ ಕನೂ ಇದ್ದು ಒಳ್ಳೆಯ ಔಷಧಿಗಳನ್ನು ಪಡೆದುಕೊಂಡರೂ ರೋಗಿಯು ಕೆಲವೊಮ್ಮೆ ಸಾಯುವುದನ್ನು ನೋಡುತ್ತೇವೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಸಮರ್ಥನಾದ ವೈದ್ಯನೇ ಚಿಕಿತ್ಸೆ ಮಾಡದಿದ್ದರೂ, ಔಷಧಿಗಳು ಉತ್ತಮವೇ ಆಗಿರದಿದ್ದರೂ, ಪರಿಚಾರಕನೂ ಯೋಗ್ಯನೇ ಆಗಿರದಿದ್ದರೂ ರೋಗಿ ಸಾಯದೆ

ಬದುಕಿಕೊಳ್ಳುತ್ತಾನೆ, ಗುಣಮುಖನಾಗುತ್ತಾನೆ. ಆದುದರಿಂದ
ಚಿಕಿತ್ಸೆಯಲ್ಲಿ ವೈದ್ಯ, ಔಷಧಿ, ಪರಿಚಾರಕ ಇವೆಲ್ಲ ಮುಖ್ಯವೇ
ಅಲ್ಲ. ಮದ್ದು ಮಾಡಿದರೂ ಒಂದೇ, ಮಾಡದಿದ್ದರೂ ಒಂದೇ.
ರೋಗ ಬಂದಾಗ ಮಾಡದಿರುವುದೇ ಒಳ್ಳೆಯದು. ರೋಗಿ
ಸಾಯುವುದಿದ್ದರೆ ಮದ್ದು ಮಾಡಿದರೂ ಸಾಯುತ್ತಾನೆ,
ಆಯುಸ್ಸು ಗಟ್ಟಿಯಾಗಿದ್ದರೆ ಮದ್ದಿಲ್ಲದಿದ್ದರೂ ಬದುಕಿಕೊಳ್ಳು
ತ್ತಾನೆ, ಎಂದು.

ಇದನ್ನು ಆತ್ರೇಯನು ಒಪ್ಪುವುದಿಲ್ಲ. "ನೀನು ಹೇಳು
ವುದು ತಪ್ಪು. ರೋಗಗಳಲ್ಲಿ ಸಾಧ್ಯ, ಅಸಾಧ್ಯವೆಂಬ ಭೇದ
ವಿದೆ. ಸಾಧ್ಯವಾದುದೆಂದರೆ ಔಷಧಿಗಳಿಂದ ಗುಣಪಡಿಸಬಹು
ದಾದ ರೋಗಗಳು ; ಅಸಾಧ್ಯವೆಂದರೆ ರೋಗ ತೀರ ಉಲ್ಬಣ
ವಾಗಿದ್ದು ಯಾವ ಚಿಕಿತ್ಸೆಗೂ ಬಗ್ಗದಿರುವಂಥದು. ಮೂರ
ನೆಯದೂ 'ಯಾಪ್ಯ'ವೆಂಬ ಭೇದವಿದೆ – ಎಂದರೆ ರೋಗವನ್ನು
ಗುಣಪಡಿಸುವುದು ಸಾಧ್ಯವಿಲ್ಲದಿದ್ದರೂ, ಒಳ್ಳೆಯ ಔಷಧಿ
ಗಳಿಂದ ರೋಗಿ ಸಾಯದಂತೆ ನೋಡಿಕೊಳ್ಳುವುದು. 'ಸಾಧ್ಯ'
ವಾದ ರೋಗಗಳಿಗೆ ಮಾಡಿದ ಮದ್ದು ಉಪಯೋಗವಿಲ್ಲದೆ
ಹೋಗುವುದಿಲ್ಲ.

ಕೆಲವೊಮ್ಮೆ ಔಷಧಿಯಿಲ್ಲದೆ ರೋಗ ಗುಣವಾಗುವುದು
ನಿಜ. ಆದರೆ ಅಲ್ಲಿಯೂ ಔಷಧಿಯ ಉಪಯೋಗವಿದೆ.
ನಡೆಯುತ್ತಿರುವಾಗ ಜಾರಿ ಬಿದ್ದವನು ಬಲಶಾಲಿಯಾದರೆ
ಯಾರ ನೆರವೂ ಇಲ್ಲದೆ ತಾನೇ ಎದ್ದು ನಿಲ್ಲಬಲ್ಲ. ಆದರೆ
ಯಾರಾದರೂ ನೆರವಾದರೆ ಅವನಿಗೆ ಅನುಕೂಲವೇ ಅಲ್ಲವೆ ?
ಇನ್ನಷ್ಟು ಬೇಗನೆ ಎದ್ದು ನಿಂತಾನು, ಮತ್ತೆ ಯಾವ ಗಾಸಿಯೂ

ಆಗದಂತೆ ಎದ್ದು ನಿಂತಾನು. ಜಾರಿ ಬಿದ್ದವನು ದುರ್ಬಲ ನಾದರಂತೂ ಬೇರೆಯುವರ ನೆರವು ಬೇಕೇ ಬೇಕಲ್ಲವೆ ? ರೋಗ ಗಳ ವಿಚಾರವಾಗಿ ಔಷಧಿ, ವೈದ್ಯ ಮೊದಲಾದ 'ಅಂಗ'ಗಳು ಹೀಗೆಯೇ ನೆರವಾಗುತ್ತವೆ. ಆದ್ದರಿಂದ ರೋಗಿಗೆ ಮದ್ದು ಮಾಡಿದರೂ ಒಂದೇ, ಮಾಡದಿದ್ದರೂ ಒಂದೇ ಎಂದು ಹೇಳು ವುದು ಸರಿಯಲ್ಲ. ಸಾಯುವವನನ್ನು ವೈದ್ಯ ತಡೆಯಲಾರ, ನಿಜ. ಆದರೆ ಬದುಕಬಲ್ಲವನಿಗೆ ಮದ್ದು ಮಾಡದೆ ಅವನನ್ನು ಸಾಯ ಗೊಡುವುದು ವೈದ್ಯನಿಗೆ ತರವಲ್ಲ".

ಇದು ಆತ್ರೇಯನ ವಾದ.

## ಪ್ರಚಾರೋಪನ್ಯಾಸ ಮಾಲೆ

| | | |
|---|---|---|
| 1. | ನಗೆಯು ನೆಲೆ | ಎಸ್. ಕೆ. ರಾಮಚಂದ್ರರಾವ |
| 2. | ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| 3. | ಶಾಂತಿನಾಥ ಕವಿ | ಕಮಲ ಹಂಪನಾ |
| 4. | ಶ್ರೀ ಕವಿ ಲಕ್ಷ್ಮೀಶ | ಜಿ. ಎಸ್. ಸಿದ್ಧಲಿಂಗಯ್ಯ |
| 5. | ಉತ್ತಂಗಿ ಚನ್ನಪ್ಪ | ಸ. ಸ. ಮಾಳವಾಡ |
| 6. | ಬಯಲಾಟಗಳು | ಚಂದ್ರಶೇಖರ ಕಂಬಾರ |
| 7. | ನಾಟಕದಲ್ಲಿ ನವ್ಯತೆ | ಪಿ. ಲಂಕೇಶ್ |
| 8. | ದ್ರಾವಿಡ ಸಂಖ್ಯಾವಾಚಕಗಳು | ಹಂಪ. ನಾಗರಾಜಯ್ಯ |
| 9. | ಎದೆ ರೋಗಗಳು | ಎಂ. ಬಸವರಾಜೆ ಅರಸು |
| 10. | ಅರವಿಂದರ ವಿಚಾರಧಾರೆ | ಸಿ. ಕೆ. ವೆಂಕಟರಾಮಯ್ಯ |
| 11. | ಪೂರ್ಣಯೋಗಿ ಶ್ರೀ ಅರವಿಂದರು | ಕೋ. ಚನ್ನಬಸಪ್ಪ |
| 12. | ಪ್ರಾಚೀನ ಸಂಸ್ಕೃತಿ | ಎಸ್. ಕೆ. ರಾಮಚಂದ್ರರಾವ್ |
| 13. | ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ | ಎನ್. ಜಿ. ಚಂದ್ರಶೇಖರಯ್ಯ |
| 14. | ಸಣ್ಣ ಕೈಗಾರಿಕೆಗಳು | ಆರ್. ಎಸ್. ಆರಾಧ್ಯ |
| 15. | ವಿವಾಹ ಪದ್ಧತಿಗಳು | ಎಸ್. ಕೆ. ರಾಮಚಂದ್ರರಾವ್ |
| 16. | ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| 17. | ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿಶೆಟ್ಟಿ |
| 18. | ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| 19. | ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| 20. | ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 21. | ಕುರುಡು | ಎಸ್. ಟಿ. ಪುಟ್ಟಣ್ಣ |
| 22. | ಕಣ್ಣಿನ ರೋಗಗಳು | ಎಸ್. ಟಿ. ಪುಟ್ಟಣ್ಣ |
| 23. | ಭಯ : ಸರಳ ವಿಶ್ಲೇಷಣೆ | ಎಂ. ಶಿವರಾಂ |
| 24. | ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| 25. | ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| 26. | ಅಂತರ್ಜಲ | ಸಿ. ನಾಗಣ್ಣ |
| 27. | ಪಂಪ | ತ. ಸು. ಶಾಮರಾಯ |
| 28. | ದೇಹರಚನೆ ಹಾಗೂ ಮೂಳೆಗಳು | ಎಸ್. ಬಿ. ವಸಂತ ಕುಮಾರ್ |
| 29. | ಶ್ರೀನಿವಾಸ ರಾಮಾನುಜನ್ | ಜಿ. ಟಿ. ನಾರಾಯಣರಾವ್ |
| 30. | ಮಹಾಕವಿ ಕುಮಾರನಾಶಾನ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕಟ |
| 31. | ತುಳ್ಳಲ್‌ಕವಿ ಕುಂಜನ್ ನಂಬಿಯಾರ್ | ಬಿ. ಕೆ. ತಿಮ್ಮಪ್ಪ, ಟಿ. ವೆಂಕಟ |
| 32. | ಪರಾಮಾನಸಶಾಸ್ತ್ರ | ಎಸ್. ಕೆ. ರಾಮಚಂದ್ರರಾವ್ |
| 33. | ಕ್ಷಯ | ಎಂ. ಬಸವರಾಜೆ ಅರಸು |